# " ಸರ್ವೋದಯ ಕಾವ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ "

(ಕನ್ನಡ ಎಂ.ಫಿಲ್ ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರ ಪಡಿಸಿದ ನಿಬಂಧ)


ಮಾರ್ಗದರ್ಶಕರು :

ಪ್ರೊ॥. ಜಯಪ್ರಕಾಶಗೌಡ

ಸಂಶೋಧಕರು :

ಎಂ.ಕೆ. ಕೆಂಪಮ್ಮ





ಕರ್ನಾಟಕ ಸಂಘ (ರಿ). ಮಂಡ್ಯ

ಎಂ. ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)

2007-08

# "ನವೋದಯ ಕಾವ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ"

(ಕನ್ನಡ ಎಂ.ಫಿಲ್. ಪದವಿಗಾಗಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ನಿಬಂಧ)

ಮಾರ್ಗದರ್ಶಕರು:
ಪ್ರೊ॥ ಜಯಪ್ರಕಾಶಗೌಡ



ಸಂಶೋಧಕರು:
ಎಂ.ಕೆ. ಕೆಂಪಮ್ಮ






ಕರ್ನಾಟಕ ಸಂಘ (ರಿ), ಮಂಡ್ಯ.
ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
(ಕನ್ನಡ ವಿ.ವಿ. ಹಂಪಿ ಮಾನ್ಯತೆ ಪಡೆದಿದೆ)
೨೦೦೭ - ೨೦೦೮

# ಮಾರ್ಗದರ್ಶಕರ ಪ್ರಮಾಣಪತ್ರ

ಎಂ.ಫಿಲ್. ತರಗತಿಯ ವಿದ್ಯಾರ್ಥಿಯಾದ ಎಂ.ಕೆ.ಕೆಂಪಮ್ಮ ನನ್ನ ಮಾರ್ಗದರ್ಶನದಲ್ಲಿ ***"ನವೋದಯ ಕಾವ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ"*** ಎಂಬ ನಿಬಂಧವನ್ನು ಎಂ.ಫಿಲ್. ತರಗತಿಯ ಕನ್ನಡ ಸಂಶೋಧನಾ ನಿಬಂಧವನ್ನು ಕನ್ನಡ ವಿಶ್ವ ವಿದ್ಯಾಲಯಕ್ಕೆ ಒಪ್ಪಿಸಲು ಸಿದ್ಧಪಡಿಸಿದ್ದಾರೆ.

ಈ ನಿಬಂಧವನ್ನು ಈ ಮೊದಲು ಯಾವುದೇ ವಿಶ್ವ ವಿದ್ಯಾಲಯಗಳ ಪದವಿ, ಡಿಪ್ಲೊಮಾ, ಎಂ.ಫಿಲ್. ಅಥವಾ ಯಾವುದೇ ಪ್ರಶಸ್ತಿಗಾಗಲಿ ಅರ್ಪಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.

ಸ್ಥಳ: ಮಂಡ್ಯ
ದಿನಾಂಕ:೧೦.೦೯.೨೦೦೮

*ಪ್ರೊ. ಜಯಪ್ರಕಾಶಗೌಡ,*
*ನಿವೃತ್ತ ಪ್ರಾಧ್ಯಾಪಕರು,*
*ಕರ್ನಾಟಕ ಸಂಘ,*
*ಮಂಡ್ಯ.*

# ಅಭ್ಯರ್ಥಿಯ ಘೋಷಣಾ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್. ಶ್ರೀಕಂಠೇಗೌಡ ಸಂಶೋಧನಾ ಕೇಂದ್ರದಲ್ಲಿ ೨೦೦೭-೦೮ನೆಯ ಸಾಲಿಗೆ ಕನ್ನಡ ಎಂ.ಫಿಲ್ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್. ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **" *ನವೋದಯ ಕಾವ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ*"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರೊ. ಜಯಪ್ರಕಾಶಗೌಡ ಅವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಅಧ್ಯಾಯಗಳನ್ನಾಗಲಿ ಬೇರೆ ಯಾವ ಗ್ರಂಥಗಳು ಹಾಗೂ ನಿಯತಕಾಲಿಕಗಳಲ್ಲಿ ಪ್ರಕಟಿಸಿಲ್ಲವೆಂದು ಈ ಮೂಲಕ ದೃಢೀಕರಿಸುತ್ತಿದ್ದೇನೆ.

ಕನ್ನಡ ವಿಶ್ವವಿದ್ಯಾಲಯವು ನೀಡುವ ಎಂ.ಫಿಲ್. ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ.

ಸ್ಥಳ: ಮಂಡ್ಯ

ದಿನಾಂಕ:೧೧.೦೯.೨೦೦೮

Kempamma M.K.

ಸಹಿ

(ಎಂ.ಕೆ. ಕೆಂಪಮ್ಮ)

# ಪರಿವಿಡಿ

# ಅಧ್ಯಾಯ - ೧
# ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಹಿಮಾಲಯದ ಉತ್ತುಂಗ ಶಿಖರಗಳಿಂದ ಹಿಡಿದು ಕನ್ಯಾಕುಮಾರಿಯ ಮಹಾಸಾಗರದ ಸಂಗಮದ ವರೆಗೆ ವಿಶಾಲವಾಗಿ ಹರಡಿರುವ ನಮ್ಮ ಭಾರತ ವಿಶಿಷ್ಟ ಸಂಸ್ಕೃತಿಯಿಂದ ರೂಪಿತವಾದ ಶಿಷ್ಟ ನಾಡು. ಸಂಪದ್ಭರಿತ ನಾಡಾದ ಭಾರತವು ವಿದೇಶೀಯರ, ಹಲವು ಜನಾಂಗಗಳ ಆಕ್ರಮಣಕ್ಕೆ ತುತ್ತಾದದ್ದು ಇತಿಹಾಸದ ಪುಟಗಳಲ್ಲಿ ಅಚ್ಚಳಿಯದೆ ಉಳಿದಿದೆ.

ವ್ಯಾಪಾರದ ಉದ್ದೇಶವನ್ನಿಟ್ಟುಕೊಂಡು ಬಂದ ವಿದೇಶೀಯರು ಕ್ರಮೇಣ ಭಾರತದ ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರದ ಮೇಲೆ ಪ್ರಭಾವ ಬೀರುತ್ತಾ ಹೋದರು. ಅಂತಹವರಲ್ಲಿ ಬ್ರಿಟಿಷರು ಪ್ರಮುಖರು. ಅವರು ಭಾರತದ ಆಡಳಿತವನ್ನು ತನ್ನ ಹಿಡಿತದಲ್ಲಿ ಇಟ್ಟುಕೊಳ್ಳುವ ಮೂಲಕ ಭಾರತೀಯರನ್ನು ದಾಸ್ಯಕ್ಕೆ ದೂಡಿದರು.ಆಂಗ್ಲರ ಈ ಮರ್ಮವನ್ನು ತಡವಾಗಿ ಅರಿತ ಭಾರತೀಯರು ದೇಶವನ್ನು ಸ್ವತಂತ್ರ ರಾಷ್ಟ್ರವಾಗಿ ಮಾಡಲು ಹೋರಾಟವನ್ನೇ ಮಾಡಬೇಕಾಯಿತು. ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಪ್ರೇರಣೆ ನೀಡಿದ ಅಂಶಗಳಲ್ಲಿ ಸಾಹಿತ್ಯವೂ ಒಂದು. ಸ್ವಾತಂತ್ರ್ಯ ಚಳವಳಿಯ ಕಾಲದಲ್ಲಿ ಹೋರಾಟಕ್ಕೆ ಕರೆ ನೀಡುವ, ರಾಷ್ಟ್ರಕ್ಕಾಗಿ ಪ್ರಾಣತ್ಯಾಗ ಮಾಡುವ, ದೇಶದ ಪರಂಪರೆ, ಸಂಸ್ಕೃತಿಯನ್ನು ವೈಭವೀಕರಿಸುವ, ನಾಡು ನುಡಿಗಳ ಪ್ರೇಮವನ್ನು ಮೆರೆಯುವ, ರಾಷ್ಟ್ರಕ್ಕಾಗಿ ಹೋರಾಡಿ ಮಡಿದ ವೀರರನ್ನು ಕೊಂಡಾಡುವ, ಭಾವೈಕ್ಯತೆಯನ್ನುಂಟು ಮಾಡುವ, ಸಾಮಾನ್ಯ ಜನರಲ್ಲಿ ಜಾಗೃತಿ ಮೂಡಿಸುವಂತಹ ಅಂಶಗಳು ಸಾಹಿತ್ಯದಲ್ಲಿ ಬಿಂಬಿತವಾದವು. ಇದೆಲ್ಲವು ನವೋದಯ ಸಾಹಿತ್ಯದಲ್ಲಿ ಕಂಡು ಬಂದಿದೆ.

ಹಳಗನ್ನಡ ಕಾವ್ಯ ರೂಪುಗೊಂಡು ಬೆಳೆದ ಕಾಲಮಾನ ಧಾರ್ಮಿಕ ಪ್ರಭಾವದಿಂದ ಕೂಡಿತ್ತು. ಧರ್ಮವೇ ಜನಜೀವನದ ಪ್ರಮುಖ ಉಸಿರಾಗಿತ್ತು. ಪ್ರಾಚೀನ ಕಾವ್ಯಗಳು ಧರ್ಮ ಪ್ರಚಾರದ ಸಾಧನವಾಗಿ ರೂಪುಗೊಂಡಂತಿವೆ.ಆದರೆ ಬ್ರಿಟಿಷರು ತಂದ ಹೊಸ ಶಿಕ್ಷಣ ವ್ಯವಸ್ಥೆ ಭಾರತೀಯ ಸಾಹಿತ್ಯ ಪ್ರಪಂಚ ಹಾಗೂ ಸಮಾಜದಲ್ಲಿ ಹೊಸ ಕ್ರಾಂತಿಯನ್ನೇ ಉಂಟು ಮಾಡಿತು. ಇಂಗ್ಲಿಷ್ ಸಾಹಿತ್ಯ ಹಾಗೂ ಇಂಗ್ಲೆಂಡಿನ ಚರಿತ್ರೆಗಳ ಅಧ್ಯಯನ ಮಾಡಿದ ಭಾರತೀಯರು ಎಲ್ಲವನ್ನು ಪ್ರಶ್ನಿಸುವ, ವಿಶ್ಲೇಷಿಸುವ ಮನೋಧರ್ಮವನ್ನು ಪರಿಚಯ ಮಾಡಿಕೊಂಡರು. ಅದುವರೆಗೆ, ರಾಜನು ಭಗವಂತನ ಪ್ರತಿನಿಧಿ ಎಂಬ ನಂಬಿಕೆಯನ್ನು ಹೊಂದಿದ್ದ ಜನತೆಯು ರಾಜನ ಅಧಿಕಾರವನ್ನು ಪ್ರಶ್ನಿಸುತ್ತಾ ಹೋಗಿ ಪ್ರಜೆಗಳ ಸ್ವಾತಂತ್ರ್ಯಕ್ಕೆ ಹೋರಾಟ ನಡೆಸಲು ದಾರಿಯಾಯಿತು.

ಭಾರತ ಸ್ವಾತಂತ್ರ್ಯ ಸಂಗ್ರಾಮಕ್ಕೆ ಮಹಾತ್ಮ ಗಾಂಧಿಯವರ ಉಜ್ವಲ ವ್ಯಕ್ತಿತ್ವ ಈ ರಾಷ್ಟ್ರದ ಜನತೆಯ ಹೃದಯದಲ್ಲಿ ಸ್ವಾತಂತ್ರ್ಯದ ಕಿಚ್ಚನ್ನು ಹತ್ತಿಸಿತು. ಇಲ್ಲಿನ ಜನರಲ್ಲಿದ್ದ ರಾಜಭಕ್ತಿ ರಾಷ್ಟ್ರಪ್ರೇಮವಾಗಿ ಪರಿವರ್ತಿತವಾಯಿತು. ಅಷ್ಟೇ ಅಲ್ಲದೆ ಆಯಾ ರಾಜ್ಯದ ಆಳರಸರು ಬ್ರಿಟಿಷ್ ಅಧಿಕಾರಿಗಳ ನಿಯಂತ್ರಣಕ್ಕೆ ಒಳಪಟ್ಟಿದ್ದು, ಜನತೆಯನ್ನು ದಾಸ್ಯಕ್ಕೆ ದೂಡಲು ಪ್ರಯತ್ನಿಸಿದ ಕಾರಣದಿಂದ ರಾಜ ನಿಷ್ಠೆ ದೂರಾಯಿತು. ಈ ಅವಕಾಶವನ್ನು ಗಾಂಧಿಯವರ ಮುಖಂಡತ್ವದಲ್ಲಿದ್ದ, ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಸದುಪಯೋಗ ಪಡಿಸಿಕೊಂಡು, ಜನರನ್ನು ಒಗ್ಗೂಡಿಸಿ ಸ್ವಾತಂತ್ರ್ಯ ಸಂಗ್ರಾಮದ ಕಹಳೆಯನ್ನು ಊದಿದರು. ಸ್ವಾತಂತ್ರ್ಯ ಹೋರಾಟವು ದೇಶಾಭಿಮಾನವನ್ನು ಜೀವಂತಗೊಳಿಸಿದ್ದಲ್ಲದೆ, ಒಂದು ರಾಷ್ಟ್ರೀಯ ಮನೋ ಧರ್ಮವನ್ನು, ರಾಷ್ಟ್ರೀಯ ಆದರ್ಶಗಳನ್ನು ರೂಪಿಸಿತು. ಜೊತೆಗೆ ಅಕ್ಷರಸ್ಥರು ಮತ್ತು ಅನಕ್ಷರಸ್ಥರು, ಹಳ್ಳಿಗರು ಮತ್ತು ನಗರ ವಾಸಿಗಳನ್ನು ಪರಸ್ಪರ ಹತ್ತಿರಕ್ಕೆ ತಂದು ಭಾರತೀಯತೆಯನ್ನು ಮೂಡಿಸಿ ದಿಟ್ಟ

ಹೋರಾಟಕ್ಕೆ ಅವರನ್ನು ಅಣಿಗೊಳಿಸಿದರು. ಇದರ ಪರಿಣಾಮವಾಗಿ ಕನ್ನಡ ನಾಡಿನಲ್ಲೂ ಪರಿವರ್ತನೆಯ ಗಾಳಿ ಸುಮಾರು ಕ್ರಿ.ಶ. ೧೮೨೦ ರ ಹೊತ್ತಿಗೆ ಬೀಸಲು ಪ್ರಾರಂಭವಾಯಿತು. ೧೮೭೦ರ ವೇಳೆಗೆ ಇದಕ್ಕೊಂದು ರೂಪ ಬಂದು, ಅದು ಸಾಹಿತ್ಯದ ಮೇಲೂ ತನ್ನ ಪ್ರಭಾವವನ್ನು ಬೀರಿತು. ಆಗ ಸಾಹಿತ್ಯದಲ್ಲಿ ಹೊಸ ಯುಗದ ಹೊಸ ಸಂವೇದನೆಗಳು ಚಿಗುರೊಡೆಯ ತೊಡಗಿದವು. ೧೮೭೦ ರಿಂದ ೧೯೧೦ರ ವರೆಗಿನ ಕಾಲ ಮಾನವು ನವೋದಯದ ಪೂರ್ವ ಸಿದ್ಧತೆಯಾಗಿ ಕಂಡು ಬಂದಿತು. ಹೊಸಗನ್ನಡ ಸಾಹಿತ್ಯ ಸಂದರ್ಭದಲ್ಲಿ ಕಂಡು ಬಂದ ಬಿಎಂಶ್ರೀಯವರು ಪ್ರಮುಖವಾಗಿ ನವೋದಯದ ಸಾಹಿತ್ಯದ ಉದಯಕ್ಕೆ ಕಾರಣರಾದರು. ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಅವರು ಇಂಗ್ಲಿಷ್ ಕಾವ್ಯಗಳನ್ನು ಅಭ್ಯಾಸ ಮಾಡಿ, ಅವುಗಳನ್ನು ಅನುವಾದಿಸುವ ಕೆಲಸವನ್ನು ಪ್ರಾರಂಭಿಸಿದರು.

ಕ್ರಿ.ಶ. ೧೯೨೦ರಿಂದ ಪ್ರಾರಂಭವಾದ ನವೋದಯ ಸಾಹಿತ್ಯವು ೧೯೫೦ರ ವರೆವಿಗೂ ಇದರ ಪರಿಧಿ ಹರಡಿದೆ. ಬಿಎಂಶ್ರೀಯವರ `ಇಂಗ್ಲಿಷ್ ಗೀತಗಳು' ಎಂಬ ಕೃತಿಯಿಂದ ಆರಂಭಗೊಂಡ ನವೋದಯ ಕಾವ್ಯ ವಿ.ಕೃ.ಗೋಖಾಕ್‌ರವರೆಗೂ ವ್ಯಾಪಿಸಿದೆ. ಗೋವಿಂದಪೈ, ಪಂಜೆ ಮಂಗೇಶರಾಯರು, ಕಡಂಗೋಡ್ಲು ಶಂಕರಭಟ್ಟ, ಸೇಡಿಯಾಪುಕೃಷ್ಣಭಟ್ಟ, ಕಯ್ಯಾರ ಕಿಞ್ಞಣ್ಣರೈ, ಕುವೆಂಪು, ಬೇಂದ್ರೆ, ಡಿವಿಜಿ, ಮಾಸ್ತಿ ಮೊದಲಾದ ಕವಿಗಳ ಕಾವ್ಯ ರಚನೆಗೆ ಭಾರತದ ಸ್ವಾತಂತ್ರ್ಯ ಹೋರಾಟ ಸ್ಫೂರ್ತಿಯನ್ನು ಒದಗಿಸಿತು.

ಭಾರತ ಸ್ವಾತಂತ್ರ್ಯ ಹೋರಾಟವನ್ನು ಕಂಡರಿಯದ ನಮಗೆ ಸಾಹಿತ್ಯದಿಂದ ಅದರ ದರ್ಶನವಾಗುತ್ತದೆ. ಐತಿಹಾಸಿಕ, ಸಾಹಿತ್ಯಿಕ ದಾಖಲೆಗಳಲ್ಲಿರುವ ಈ ಹೋರಾಟದ ಸಂಗತಿಗಳನ್ನು ಕೆದಕಿದರೆ ಇನ್ನೂ ಕಿಡಿಕಾರುವುದನ್ನು ಕಾಣಬಹುದು. ಅಲ್ಲದೆ ಸಾಹಿತಿಗಳ ಕಲ್ಪನೆಗೆ ಇಂದಿಗೂ ಸ್ಫೂರ್ತಿಯನ್ನೊದಗಿಸುತ್ತದೆ. ಹೋರಾಟದ ಕಾಲದಲ್ಲಿ ಜನತೆಯಲ್ಲಿ ಚೈತನ್ಯವನ್ನು ತುಂಬಿ, ಹುರಿದುಂಬಿಸಿದ ಸಾಹಿತ್ಯ ಹಾಗೂ ಅಂತಹ ಕಾರ್ಯದಲ್ಲಿ ಸಕ್ರೀಯವಾಗಿ ತೊಡಗಿದ ಸಾಹಿತಿಗಳ ಪಾತ್ರ ಹಿರಿದಾದುದು. ಭಾರತೀಯ ಪ್ರಜೆಗಳಾದ ನಮಗೆ ಅದರ ಹಿರಿಮೆ ಗರಿಮೆಗಳು ಸಾಹಿತ್ಯದ ಮೂಲಕ ಪರಿಚಿತವಾಗುತ್ತದೆ. ಸಾಹಿತ್ಯ ಅಧ್ಯಯನದ ವಿದ್ಯಾರ್ಥಿಯಾದ ನನಗೆ ನವೋದಯ ಕಾವ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ ಹೇಗಿತ್ತೆಂಬುದನ್ನು ಕವಿತೆಗಳನ್ನು ವಿಶ್ಲೇಷಿಸುವುದರ ಮೂಲಕ ಈ ನಿಬಂಧದಲ್ಲಿ ತಿಳಿಸುವ ಪ್ರಯತ್ನವನ್ನು ಮಾಡುತ್ತೇನೆ.

`` ನವೋದಯ ಕಾವ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ" ಎಂಬ ಶೀರ್ಷಿಕೆಯಡಿ, ಭಾರತದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಕನ್ನಡ ನಾಡಿನ ಕವಿಗಳು ಈ ಹೋರಾಟದಿಂದ ಸ್ಫೂರ್ತಿ ಪಡೆದು ಹೇಗೆ ಕಾವ್ಯ ರಚಿಸಿದ್ದಾರೆ ಎಂಬುದನ್ನು ಆ ಸಂದರ್ಭದಲ್ಲಾದ ಸಾಮಾಜಿಕ, ರಾಜಕೀಯ ಪರಿವರ್ತನೆಗಳನ್ನು ತಿಳಿಯಲಾಗುತ್ತದೆ.

ಅಧ್ಯಯನದ ಉದ್ದೇಶ, ವ್ಯಾಪ್ತಿಯನ್ನು ಒಳಗೊಂಡಂತೆ ಈ ನಿಬಂಧದಲ್ಲಿ ಒಟ್ಟು ೭ ಅಧ್ಯಾಯಗಳಿವೆ. ನವೋದಯ ಕಾವ್ಯದ ಸ್ವರೂಪ ಎಂಬ ಅಧ್ಯಾಯದಲ್ಲಿ ನವೋದಯ ಪದದ ಅರ್ಥ, ವ್ಯಾಪ್ತಿ, ನವೋದಯ ಕಾವ್ಯದ ಲಕ್ಷಣಗಳು, ಪ್ರೇರಣೆ, ಪ್ರಭಾವಗಳ ಬಗ್ಗೆ ತಿಳಿಸಲಾಗಿದೆ. ನಂತರ ವಸಾಹತುಶಾಹಿ ಮತ್ತು ಸ್ವಾತಂತ್ರ್ಯ ಹೋರಾಟವನ್ನು ಕುರಿತು ಬರೆಯಲಾಗಿದೆ. ವಸಾಹತು ಶಾಹಿ ಪ್ರಭುತ್ವದ ಸ್ಥಾಪನೆ, ಬೆಳವಣಿಗೆ, ಭಾರತದಲ್ಲಿ ಸ್ವಾತಂತ್ರ್ಯದ ಆಂದೋಲನ ಹಾಗೂ ಕರ್ನಾಟಕದಲ್ಲಿ ಸ್ವಾತಂತ್ರ್ಯ ಹೋರಾಟದ ವಿಚಾರಗಳಿಗೆ ನವೋದಯ ಕಾವ್ಯದಲ್ಲಿ ಸ್ವಾತಂತ್ರ್ಯ ಪರಿಕಲ್ಪನೆ ~~ಎಂಬ ಅಧ್ಯಾಯದಲ್ಲಿ~~ ನವೋದಯ ಕವಿಗಳಲ್ಲಿ ಆ ಕಲ್ಪನೆ ಹೇಗೆ ಮೂಡಿ ಬಂದಿದೆ ಎಂಬುದರ ಸೂಕ್ಷ್ಮ ವಿಚಾರಗಳಿವೆ. ಜೊತೆಗೆ ಕಾವ್ಯ ರೂಪದಲ್ಲಾದ ಹೊಸ ಪ್ರಯೋಗಗಳನ್ನು ಪರಿಚಯಿಸಲಾಗುತ್ತದೆ. ನಂತರದ

ಅಧ್ಯಾಯದಲ್ಲಿ ಸ್ವಾತಂತ್ರ್ಯ ಕುರಿತ ನವೋದಯ ಕವಿತೆಗಳ ವಿಶ್ಲೇಷಣೆಯನ್ನು ಭಾರತೀಯತೆ, ಸ್ವಾತಂತ್ರ್ಯ ಆಂದೋಲನ, ಹೋರಾಟಗಾರರು, ಸಾಮಾಜಿಕ ಪರಿವರ್ತನೆ, ರಾಜಕೀಯ ಪರಿವರ್ತನೆ, ಶ್ರೀ ಸಾಮಾನ್ಯ, ಭಾಷಾ ಚಳವಳಿ ಎಂಬ ವಿಭಾಗ ಕ್ರಮವನ್ನು ಮಾಡಲಾಗಿದೆ. ನವೋದಯ ಕವಿಗಳು ಆ ಎಲ್ಲ ಪರಿಕಲ್ಪನೆಗಳಿಗೂ ತಮ್ಮದೇ ಆದ ರೀತಿಯಲ್ಲಿ ಅಭಿವ್ಯಕ್ತಿಯನ್ನು ನೀಡಿದ್ದಾರೆ. ಇಲ್ಲಿ ಮುಖ್ಯವಾಗಿ ಕುವೆಂಪು, ಬೇಂದ್ರೆ, ಗೋವಿಂದ ಪೈ ಅವರ ಸ್ವಾತಂತ್ರ್ಯ ಕುರಿತ ಕವನಗಳನ್ನು ವಿಶ್ಲೇಷಣೆ ಮಾಡಲಾಗಿದೆ. ಇವರುಗಳೇ ಅಲ್ಲದೆ ಡಿವಿಜಿ, ಸೇಡಿಯಾಪು ಕೃಷ್ಣಭಟ್ಟ, ಪಂಜೆ ಮಂಗೇಶರಾಯರು, ಕಡೆಂಗೋಡ್ಲು ಶಂಕರಭಟ್ಟ ಮುಂತಾದ ನವೋದಯ ಕವಿಗಳ ಕೆಲವು ಕವನಗಳನ್ನು ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ನಿಟ್ಟಿನಲ್ಲಿ ಭಾರತೀಯರಲ್ಲಿನ ಏಕತೆ, ಸ್ವಾತಂತ್ರ್ಯದ ತುಡಿತ, ಹೋರಾಟಗಾರರ ಆದರ್ಶ ಮೌಲ್ಯಗಳು, ಸಾಮಾಜಿಕ, ರಾಜಕೀಯ ಪರಿವರ್ತನೆಯ ವಿಚಾರಗಳು, ಶ್ರೀ ಸಾಮಾನ್ಯನ ಸ್ಥಾನಮಾನ, ಭಾಷಾ ಚಳವಳಿಯ ವಿವೇಚನೆಗಳು ನವೋದಯ ಕಾವ್ಯದಲ್ಲಿ ಅಭಿವ್ಯಕ್ತಿ ಪಡೆದಿರುವುದನ್ನು ಮನಗಾಣಿಸುವ ಆಶಯವನ್ನು ಹೊಂದಿದ್ದೇನೆ.

# ಅಧ್ಯಾಯ -೨
# ನವೋದಯ ಕಾವ್ಯದ ಸ್ವರೂಪ

ಹೊಸಗನ್ನಡ ಸಾಹಿತ್ಯ ಘಟ್ಟಗಳಲ್ಲಿ ಮೊದಲನೆಯ ಘಟ್ಟ ನವೋದಯ. ನವೋದಯ ಎಂದರೆ ಹೊಸದು, ಹೊಸತರ ಉದಯ, ಹೊಸತನ ಎಂಬುದು ಕವಿಯ ಆಂತರಿಕ ಅಭೀಪ್ಸೆ ಮತ್ತು ಬಾಹ್ಯ ಪ್ರಪಂಚದ ಪರಿಣಾಮದಿಂದಾಗಿ ಕಾವ್ಯದಲ್ಲಿ ಕಂಡುಬರುತ್ತದೆ. ೧೯ನೆಯ ಶತಮಾನದ ಕಡೆಯ ಭಾಗದಲ್ಲಿ ಹೊಸಗನ್ನಡ ಸಾಹಿತ್ಯ ಉದಯವಾಯಿತು. ಭಾರತದಾದ್ಯಂತ ನಡೆಯುತ್ತಿದ್ದ ಸಂಘರ್ಷಗಳು ಮತ್ತು ಪಾಶ್ಚಿಮಾತ್ಯ ಸಾಹಿತ್ಯದ ಪ್ರಭಾವ ಪ್ರೇರಣೆಗಳಿಂದಾಗಿ ಕನ್ನಡ ಸಾಹಿತ್ಯದಲ್ಲಿ ಹೊಸ ಚೈತನ್ಯವುಂಟಾಯಿತು.

`ನವೋದಯ' ಎಂಬುದು ಇಂಗ್ಲಿಷ್‌ನ `ರೊಮ್ಯಾಂಟಿಕ್' ಎಂಬ ಪದಕ್ಕೆ ಸಂವಾದಿಯಾಗಿ ಬಳಕೆಯಾಗುತ್ತಿದೆ. ರೊಮ್ಯಾಂಟಿಕ್ ಎಂಬುದು ರೊಮ್ಯಾನಿಕಾ ಎಂಬುದರಿಂದ ಬಂದಿದ್ದು, ಈ ಪದದ ಕ್ರಿಯಾ ವಿಶೇಷಣವಾದ `ರೊಮ್ಯಾನಿಸ್` ಎಂಬುದರಿಂದ `ರೋಮಾನ್ಸ್` ಎಂಬ ನಾಮಪದ ಬಂದಿದೆ. ರೊಮಾನ್ಸ್ ಎಂದರೆ ಕಟ್ಟುಕತೆ, ಕಲ್ಪಿತ ಕಥೆಗಳ ಕಂತೆ, ವಿಲಕ್ಷಣ ಕಥೆ ಎಂಬ ಅರ್ಥಗಳಿದ್ದು, ನಂತರ ಒಂದು ಸಾಹಿತ್ಯ ಚಳವಳಿಯ ಹೆಸರನ್ನು ಪಡೆಯಿತು. `` ರೊಮ್ಯಾಂಟಿಕ್ ಎನ್ನುವುದು ಮೊದಮೊದಲು ಒಂದು ಭಾಷೆಯ ಹೆಸರಾಗಿ, ಬರವಣಿಗೆಯ ಒಂದು ರೀತಿ ಎಂದಾಗಿ, ಅದರಲ್ಲೂ ಯಾವುದೋ ಒಂದು ಬಗೆಯ ನಿಸರ್ಗ ವರ್ಣನೆಯ ಸಂಕೇತವಾಗಿ, ಅದೊಂದು ವಿಶಿಷ್ಟ ಜೀವನಾನುಭವದ ದೃಷ್ಟಿಕೋನವೆಂದಾಗಿ, ೧೮-೧೯ನೆಯ ಶತಮಾನಗಳಲ್ಲಿ ಒಂದು ಸಾಹಿತ್ಯ ಚಳವಳಿಯ ಹೆಸರಾಗಿ ಬಂದಿದೆ".[1] ಈ ಸಂದರ್ಭದಲ್ಲಿ ಇಂಗ್ಲಿಷ್ ಕಾವ್ಯದಲ್ಲಿ ನಡೆದ ಹೊಸ ಪ್ರಯೋಗಗಳನ್ನು ರೊಮ್ಯಾಂಟಿಕ್ ಚಳವಳಿಯೆಂದು, ಆ ಕಾಲದಲ್ಲಿ ರಚಿತವಾದ ಕಾವ್ಯವನ್ನು ರೊಮ್ಯಾಂಟಿಕ್ ಕಾವ್ಯ ಎಂದೂ ಕರೆಯಲಾಗುತ್ತದೆ.

ದೇಶೀಯ ಪರಂಪರೆ ಸಂಪದ್ಭರಿತವಾಗಿದ್ದರೂ, ಪಾಶ್ಚಿಮಾತ್ಯ ಸಾಹಿತ್ಯದಿಂದ ಆ ಕಾಲದ ನಮ್ಮ ಕವಿಗಳು ಪ್ರೇರಣೆಗಳನ್ನು ಪಡೆದರೆಂಬುದು ಒಂದು ಐತಿಹಾಸಿಕ ಸತ್ಯ. ವರ್ಡ್ಸ್‌ವರ್ತ್, ಶೆಲ್ಲಿ, ಕೋಲ್ಸ್‌ರಿಜ್ ಮುಂತಾದ ರೊಮ್ಯಾಂಟಿಕ್ ಕವಿಗಳ ಕಾವ್ಯದ ಅಧ್ಯಯನ ಕನ್ನಡ ಕಾವ್ಯಕ್ಕೆ ಹೊಸ ಆಯಾಮವನ್ನು ತಂದುಕೊಟ್ಟಿದೆ. ಇದನ್ನು `ಹೊಸಗನ್ನಡ ಸಾಹಿತ್ಯ ಚರಿತ್ರೆಯ ' ರಚನಕಾರರಾದ ಎಲ್.ಎಸ್.ಶೇಷಗಿರಿರಾವ್ ಅವರು `` ನವೋದಯ ಸಾಹಿತ್ಯ ಯುರೋಪಿನಲ್ಲಿ ರೊಮ್ಯಾಂಟಿಕ್ ಎಂದು ಕರೆಯುವ ಸಾಹಿತ್ಯಕ್ಕೆ ಹಲವು ರೀತಿಯಲ್ಲಿ ಸಮೀಪವಾಗಿದೆ" ಎಂದು ಹೇಳುತ್ತಾರೆ.

ರೊಮ್ಯಾಂಟಿಕ್ ಕಾವ್ಯದಲ್ಲಿ ಪ್ರಕೃತಿ ಪ್ರೇಮ, ರಸ ನಿಷ್ಠತೆ, ಭಾವನೆಗಳಿಗೆ ಪ್ರಾಧಾನ್ಯತೆ ನೀಡಿರುವುದು ಕಂಡು ಬರುತ್ತದೆ. ಇದು ಭಾರತೀಯ ಮನಸ್ಸುಗಳಿಗೆ ಸಹಜ ಎಂಬುದು ಒಂದು ಮುಖವಾದರೆ, ಇಂಗ್ಲಿಷ್ ರೊಮ್ಯಾಂಟಿಕ್ ಕಾವ್ಯ ಪ್ರತಿಪಾದಕರ ಧೋರಣೆಯೂ ಇದೇ ಆಗಿರುವುದು ಇದರ ಇನ್ನೊಂದು ಮುಖ.

ರೊಮ್ಯಾಂಟಿಕ್ ಕವಿಗಳ ಕಾವ್ಯದಲ್ಲಿನ ಲಕ್ಷಣಗಳು ಮತ್ತು ಭಾಷೆಗಿಂತ ಅವರ ಕಾವ್ಯ ರೂಪಗಳು ನವೋದಯ ಕಾವ್ಯದಲ್ಲಿ ಅನೇಕ ಬಗೆಯ ರೂಪ ನಿರ್ಮಾಣಕ್ಕೆ ಕಾರಣವಾಗಿರುವುದು ಮನನೀಯ. ಇಂಗ್ಲಿಷಿನ ಸಾನೆಟ್, ಪ್ರಗಾಥ, ಎಲಿಜಿ, ಕಥನ ಕಾವ್ಯ, ಖಂಡಕಾವ್ಯ, ಮಹಾಕಾವ್ಯ ಮುಂತಾದ ಕಾವ್ಯ ಪ್ರಕಾರಗಳು ಮೊಟ್ಟ ಮೊದಲಿಗೆ ಕನ್ನಡದಲ್ಲಿ ಕಾಣಿಸಿಕೊಳ್ಳುವುದು ರೊಮ್ಯಾಂಟಿಕ್ ಕಾವ್ಯದ ಪ್ರಭಾವದಿಂದ ಎಂಬುದು ಒಪ್ಪತಕ್ಕ ವಿಷಯವಾಗಿದೆ.

ನವೋದಯ ಸಾಹಿತ್ಯದ ಮೇಲೆ ಪ್ರಭಾವ ಬೀರಿದ ಇನ್ನೊಂದು ಮುಖ್ಯ ಸಂಗತಿಯೆಂದರೆ ರಮ್ಯವಾದ. ರಮ್ಯವಾದ ಪಶ್ಚಿಮದ ಒಂದು ಸಾಹಿತ್ಯ ಪಂಥ. ಕನಸು, ಕಲ್ಪನೆ, ಸೌಂದರ್ಯಾಭಿಲಾಷೆ, ನಿಸರ್ಗ, ಪ್ರೇಮ, ಸಾಹಸ, ದರ್ಶನಗಳಿಗೆ ರಮ್ಯ ಸಾಹಿತ್ಯದಲ್ಲಿ ಸ್ಥಾನ ದೊರೆಯಿತು. ರಮ್ಯವಾದ ಮುಖ್ಯವಾಗಿ ಆಂತರಿಕ ಪ್ರಪಂಚದ ಅಭಿವ್ಯಕ್ತಿಗೆ ಮಹತ್ವಕೊಟ್ಟ ವ್ಯಕ್ತಿ ನಿಷ್ಠ ಧೋರಣೆ, ರಮ್ಯವಾದದ ಬರಹಗಾರನಿಗೆ ಸ್ಫೂರ್ತಿ, ಭಾವ, ಅನುಭಾವಗಳು, ಅಮೂರ್ತ ಅನುಭವ, ದಿವ್ಯತ್ವದ ಹಂಬಲ ಮೊದಲಾದವುಗಳ ಬಗೆಗಿನ ತುಡಿತ ತೀವ್ರವಾಗಿತ್ತು. ಪಾಶ್ಚಿಮಾತ್ಯ ರಮ್ಯ ಸಾಹಿತ್ಯದ ಪ್ರಭಾವಕ್ಕೆ ಹೊಸಗನ್ನಡ ಸಾಹಿತ್ಯ ವಿಶೇಷವಾಗಿ ಒಳಗಾಯಿತು. ಆದ್ದರಿಂದ ಅಲ್ಲಿನ ವಸ್ತು ವೈವಿಧ್ಯತೆಯೂ ಕನ್ನಡದಲ್ಲಿ ಕಾಣಿಸಿಕೊಳ್ಳುವಂತಾಯಿತು. ಪ್ರಕೃತಿಯನ್ನು ಪ್ರಾಕೃತಿಕ ವಸ್ತುಗಳನ್ನು ಅದರ ವಿಸ್ಮಯಗಳನ್ನು ಕವಿಗಳು ತಮ್ಮ ಕಾವ್ಯಗಳಲ್ಲಿ ಹಾಡತೊಡಗಿದರು. ಸೂರ್ಯೋದಯ, ಚಂದ್ರೋದಯ, ಹಕ್ಕಿಗಳು, ಗಿರಿಸಾಲು ಇತ್ಯಾದಿ ರಮ್ಯ ವಸ್ತುಗಳೇ ಇದರ ಕಾವ್ಯ ವಸ್ತುಗಳಾದವು. ರೊಮ್ಯಾಂಟಿಕ್ ಮತ್ತು ರಮ್ಯ ಸಾಹಿತ್ಯದ ನಡುವೆ ನಿಕಟ ಸಂಬಂಧ ಹೊಂದಿರುವ ನವೋದಯ ಕಾವ್ಯವನ್ನು 'ರೊಮ್ಯಾಂಟಿಕ್ ಕಾವ್ಯ', 'ರಮ್ಯ ಕಾವ್ಯ' ಎಂಬ ಹೆಸರುಗಳಿಂದಲೂ ಕರೆಯಲಾಗುತ್ತದೆ.

``೧೯೫೦ರ ವೇಳೆಗೆ ನವ್ಯ ಕಾವ್ಯ ತನ್ನನ್ನು ತಾನು ಕನ್ನಡ ಸಾಹಿತ್ಯ ಪರಿಸರದಲ್ಲಿ ನೆಲೆಗೊಳಿಸಿಕೊಳ್ಳಲು ಹವಣಿಸುತ್ತಿದ್ದಾಗ, ತಮಗೆ ತತ್‌ಕ್ಷಣಕ್ಕೆ ಹಿಂದಿನ ಹೊಸಗನ್ನಡ ಕಾವ್ಯವನ್ನು ನವ್ಯ ಕಾವ್ಯ ಚಳವಳಿಯ ವಕ್ತಾರರು, ಇದ್ದಕ್ಕಿದ್ದ ಹಾಗೆ `ರೊಮ್ಯಾಂಟಿಕ್ ಕಾವ್ಯ' ಎಂದೂ, `ರಮ್ಯ ಕಾವ್ಯ' ಎಂದೂ ಕರೆಯ ತೊಡಗಿದರು. ನವ್ಯರು ತಮಗೆ ಸಮೀಪದ ಕಾಲದ ಹೊಸಗನ್ನಡ ಕಾವ್ಯವನ್ನು ರೊಮ್ಯಾಂಟಿಕ್ ಕಾವ್ಯ ಎಂದು ಕರೆದದ್ದು ಅದರ ಮೇಲಿನ ಗೌರವದಿಂದ ಖಂಡಿತ ಅಲ್ಲ. ಹಾಗೆ ಅವರು ಕರೆದದ್ದು, ಹೊಸಗನ್ನಡ ಕಾವ್ಯ ಪಶ್ಚಿಮದ ರೊಮ್ಯಾಂಟಿಕ್ ಕವಿಗಳ ಅನುಕರಣೆ ಹಾಗೂ ಅನುಸರಣೆಯಾಗಿದೆ ಎಂಬ ತಪ್ಪು ಕಲ್ಪನೆಯಿಂದ ಎಂದು ಕಾಣುತ್ತದೆ"[2] ಎಂದು ಜಿ.ಎಸ್.ಶಿವರುದ್ರಪ್ಪನವರು ಹೇಳಿದ್ದಾರೆ. ನವ್ಯರ ಈ ಧೋರಣೆಗೆ ತೀವ್ರವಾದ ಪ್ರತಿಕ್ರಿಯೆ ಎಂಬಂತೆ ನವೋದಯ ಎಂಬ ಪದವನ್ನು ಬಳಸಿ, ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಅನುಸರಣವಾಗಲೀ, ಅನುಕರಣೆಯಾಗಲೀ ಅಲ್ಲದೆ ಹೊಸಗನ್ನಡ ಕಾವ್ಯಕ್ಕೆ `ನವೋದಯ ಕಾವ್ಯ'ಎಂಬ ಹೆಸರನ್ನು ಕೊಟ್ಟವರು `ಕುವೆಂಪು' ಅವರು. ಭಾರತದ ರಾಜಕೀಯ, ಸಾಮಾಜಿಕ, ಧಾರ್ಮಿಕ ಹಾಗೂ ಒಟ್ಟಾರೆಯಾಗಿ ಸಾಂಸ್ಕೃತಿಕ ಪುನರುಜ್ಜೀವನವನ್ನು ನವೋದಯ ಎಂಬ ಪದ ಸೂಚಿಸುವಂತಿದೆ. ನವೋದಯ ಸಾಹಿತ್ಯದ ಆಚಾರ್ಯರಾದ ಬಿ.ಎಂ.ಶ್ರೀಕಂಠಯ್ಯನವರ -``ಪುನರುಜ್ಜೀವನ ಎಂದರೆ ಪುನರುತ್ಥಾನವಲ್ಲ, ಮೊದಲಿಗಿಂತಲೂ ಪ್ರಬುದ್ಧವಾದ ಆತ್ಮವಾಗಿ, ಹೆಚ್ಚು ಶಕ್ತಿಯಿಂದ, ಹೆಚ್ಚು ಮುಕ್ತಿಯಿಂದ ಕಾಣಿಸಿಕೊಳ್ಳುವುದು ಪುನರುಜ್ಜೀವನವೆನ್ನುವುದು ಜೀರ್ಣೋದ್ಧಾರವಲ್ಲ, ಅನುಸರಣವಲ್ಲ, ಅನುಕರಣವಲ್ಲ. ಏನೋ ಒಂದು ಧೈರ್ಯದಿಂದ ಕೂಡಿದ ವಿಚಾರ. ಹೊಸ ನಿರ್ಮಾಣ, ಮರುಹುಟ್ಟು, ಆಳವಾದ ಸಮನ್ವಯ" ಎಂಬ ಮಾತುಗಳಲ್ಲಿ ನವೋದಯದ ನಿಜವಾದ ಅರ್ಥವನ್ನು ತಿಳಿಯಬಹುದು.

ನವೋದಯ ಸಾಹಿತ್ಯವನ್ನು ರಹಮತ್ ತರೀಕೆರೆ ಅವರು `` ತನ್ನ ಗತಕಾಲದ ಪರಂಪರೆಯ ಮತ್ತು ಸಂಪ್ರದಾಯಗಳ ಮೇಲೆರಗಿ, ಅವುಗಳನ್ನು ಪರಿಷ್ಕರಿಸಲು ಸಿದ್ಧವಾದ ಒಂದು ಬಗೆಯ ಸೃಜನಾತ್ಮಕ ಚಳವಳಿ; ನವೋದಯ ಸಾಹಿತ್ಯವು ಹಳೆಯ ಸಂಪ್ರದಾಯ ಮತ್ತು ಪರಂಪರೆಯ ಜಾಡಿನಿಂದ ಹೊರಳುವ ಸಂಕ್ರಮಣ ಬದುಕಿನ ಒಂದು ಹೊಸ ಮನೋಧರ್ಮದ ಸಿದ್ಧತೆಯಾಗಿದ್ದು, ೧೯ ನೆಯ ಶತಮಾನದ ಆಂಗ್ಲ ವಸಾಹತುಶಾಹಿಯ ದಾಸ್ಯಕ್ಕೆ ಒಳಗಾದ ಸಂವೇದನೆಯಿಂದ ರೂಪಿತವಾದ ಒಂದು ಹೊಸಬಗೆಯ ಸಾಹಿತ್ಯ

ಪ್ರವೃತ್ತಿಯಾಗಿದೆ " ಎಂದಿದ್ದಾರೆ. ನವೋದಯ ಸಾಹಿತ್ಯ ವಸಾಹತುಶಾಹಿಯ ದಾಸ್ಯಕ್ಕೆ ಒಳಗಾದ ಸಂವೇದನೆಯಿಂದ ರೂಪಿತವಾದದ್ದಷ್ಟೇ ಅಲ್ಲ ಪಾಶ್ಚಾತ್ಯ ರೊಮ್ಯಾಂಟಿಕ್ ಸಾಹಿತ್ಯದ ಪ್ರೇರಣೆ ಪ್ರಭಾವ ಹಾಗೂ ಪ್ರಕೃತಿ, ನಾಡುನುಡಿಯ ಬಗೆಗಿನ ಸೂಕ್ಷ್ಮತೆಗಳೆಲ್ಲವೂ ಸಾಹಿತ್ಯದಲ್ಲಿ ಸಮ್ಮಿಳಿತವಾಗಿವೆ.

ನವೋದಯ ಕಾವ್ಯವು ಕನ್ನಡ ಸಾಹಿತ್ಯದಲ್ಲಿ ತನ್ನ ಅಸ್ತಿತ್ವವನ್ನು ಪಡೆದು ಬೆಳೆದಿರುವ ಬಗೆಯನ್ನು ಆಧರಿಸಿ, ಅದರ ಪ್ರಭಾವ ಪ್ರೇರಣೆಗಳು, ಧೋರಣೆ ಮತ್ತು ಲಕ್ಷಣಗಳನ್ನು ಈ ರೀತಿಯಾಗಿ ಗುರುತಿಸಬಹುದು.

ಸಮಾಜದಲ್ಲಿನ ಸಮಸ್ಯೆಗಳಿಗೆಲ್ಲ ಸ್ವಾತಂತ್ರ್ಯವೇ ಪರಿಹಾರ ಎಂಬುದನ್ನು ಸಾರುವುದು ಅಂದಿನ ಕಾವ್ಯದ ಪ್ರಮುಖ ಲಕ್ಷಣವಾಗಿತ್ತು. ಹೀಗಾಗಿ ಸ್ವಾತಂತ್ರ್ಯ ಬಂದ ದಿನ ಸರ್ವೋದಯದ ಕನಸು ಕಾಣುವ ಅಸಂಖ್ಯಾತ ಕವನಗಳು ಹುಟ್ಟಿಕೊಂಡವು. `ಸರ್ವರಿಗೆ ಸಮಪಾಲು, ಸರ್ವರಿಗೆ ಸಮಬಾಳು',`ಕಟ್ಟುವೆವು ನಾವು ಹೊಸ ನಾಡೊಂದನ್ನು',`ಸ್ವರಾಜ್ಯ ನನ್ನ ಜನ್ಮಸಿದ್ಧ ಹಕ್ಕು', `ವಂದೇ ಮಾತರಂ' ಮೊದಲಾದವು.

ಆಶಾವಾದಿತನ, ಜೀವನೋತ್ಸಾಹ, ಪ್ರಕೃತಿ ಪ್ರೇಮ, ಆಧ್ಯಾತ್ಮಿಕತೆ, ಆದರ್ಶವಾದ, ಮನೋವೃತ್ತಿ ಮತ್ತು ಕನಸುಗಾರಿಕೆ, ವಾಸ್ತವವನ್ನು ನೋಡುತ್ತಿರುವಂತೆಯೇ ಆದರ್ಶವನ್ನು ಹಂಬಲಿಸುವುದು, ಒಟ್ಟಿನಲ್ಲಿ `ಬಾಳು ಸ್ವೀಕಾರರ್ಹ' ಎಂಬುದು ಈ ಪಂಥದ ಕವಿಗಳ ಆಶಯ.

ಪ್ರಕೃತಿ ಪ್ರೇಮ ಈ ಕವಿಗಳ ಒಂದು ಬಹು ಮುಖ್ಯ ಅಂಶ. ಅವರಿಗೆ ಪ್ರಕೃತಿ ಚೆಲುವಿನ ತಾಣ ಮಾತ್ರವಲ್ಲ. ಜಗತ್ತಿನ ಚೇತನ ಶಕ್ತಿಯ ಪ್ರಕಟ ರೂಪ. ಭಗವಂತನ ಸಾಕ್ಷಾತ್ಕಾರ, ಜೀವನವನ್ನು ಭಾವಕ್ಕೆ, ಭಾವದಿಂದ ಶಿವಕ್ಕೆ ತಲುಪಿಸುವ ಸಾಧನ. ವರ್ಡ್ಸ್‌ವರ್ತ್, ಬೈರನ್, ಶೇಕ್ಸ್‌ಪಿಯರ್, ಟೆನ್ನಿಸನ್ ಮುಂತಾದ ರೊಮ್ಯಾಂಟಿಕ್ ಕವಿಗಳ ಬಹುಪಾಲು ಕವನಗಳಲ್ಲಿ ಪ್ರಕೃತಿ ಪಾರಮ್ಯವೇ ವಸ್ತುವಾಗಿದೆ. ಅವರ ಈ ಧೋರಣೆಯನ್ನೇ ನವೋದಯ ಕಾವ್ಯದಲ್ಲೂ ಕಾಣಬಹುದು.

ನವೋದಯ ಕಾವ್ಯ ಬದುಕಿನ ಕಠೋರ ವಾಸ್ತವಗಳಿಂದ, ಸಮಾಜದಲ್ಲಿ ನಡೆಯುವ ಶೋಷಣೆ, ಅನ್ಯಾಯಗಳಿಂದ ದೂರ ಸರಿಯುತ್ತೆಂದು ತಿಳಿಯಲಾಗದು. ಅಂಥ ವಿಷಯಗಳನ್ನು ಕುರಿತು ಆಕ್ರೋಶ, ಟೀಕೆ, ವಿಡಂಬನೆ, ಪ್ರತಿಭಟನೆ ಇರುವಂಥ ಕಾವ್ಯವು ಸಾಕಷ್ಟು ಪ್ರಮಾಣದಲ್ಲಿಯೇ ಬಂದಿದೆ. ಅವುಗಳಲ್ಲಿ ಕುವೆಂಪು ಅವರ `ಗೊಬ್ಬರ', `ಕಲ್ಕಿ', `ಯಾವ ಕಾಲದ ಶಾಸ್ತ್ರವೇನು ಹೇಳಿದರೇನು',`ಕೋಗಿಲೆ ಮತ್ತು ಸೋವಿಯತ್ ರಷ್ಯ', ಬೇಂದ್ರೆಯವರ `ಪುಟ್ಟವಿಧವೆ', `ಹೆಣದ ಹಿಂದೆ' ಇನ್ನೂ ಮೊದಲಾದ ಕವನಗಳು ವಾಸ್ತವಕ್ಕೆ ಪ್ರತಿಕ್ರಿಯಿಸುವ ಪದ್ಯಗಳಾಗಿವೆ.

ನವೋದಯ ಕಾವ್ಯದ ಸಮೃದ್ಧಿಯ ಕಾಲದಲ್ಲಿ ಭಾರತ ಪಾರತಂತ್ರ್ಯದಲ್ಲಿತ್ತು. ಸ್ವಾತಂತ್ರ್ಯದ ಆಕಾಂಕ್ಷೆ ಆ ಕಾಲದ ಪ್ರಜ್ಞಾವಂತರಲೆಲ್ಲಾ ಅತ್ಯಂತ ತೀವ್ರವಾಗಿತ್ತು. ಗಾಂಧೀಜಿಯವರು ನಾಯಕತ್ವ ವಹಿಸಿ ನಡೆಸಿದ ಸತ್ಯ ಮತ್ತು ಅಹಿಂಸೆಯ ಪ್ರಯೋಗಗಳೂ ಸಾಹಿತ್ಯವನ್ನು ತೀವ್ರವಾಗಿ ಪ್ರಭಾವಿಸಿದವು. ಹಾಗಾಗಿ ಭಾರತೀಯರಲ್ಲಿ ಏಕತೆ, ಆತ್ಮಾಭಿಮಾನ ಮತ್ತು ಆತ್ಮ ಪ್ರತ್ಯಯಗಳ ಭಾವನೆಯನ್ನು ಬಿತ್ತುವ ಜವಾಬ್ದಾರಿಯನ್ನು ಕಾವ್ಯ ಹೊತ್ತುಕೊಂಡಿತು. ಆದ್ದರಿಂದ ಆ ಕಾಲಕ್ಕೆ ಸಮಷ್ಟಿ ಮೌಲ್ಯಗಳಾಗಿದ್ದ ಸಂಗತಿಗಳನ್ನೇ ಪ್ರತಿಯೊಬ್ಬರೂ ಪ್ರತಿಪಾದಿಸುತ್ತಾ ಜನರನ್ನೂ ಒಗ್ಗೂಡಿಸುವ ಕೆಲಸ ಮಾಡತೊಡಗಿದರು. ಇದಕ್ಕೆ ಇಂಗ್ಲಿಷಿನ ರೊಮ್ಯಾಂಟಿಕ್ ಸಾಹಿತ್ಯ ಒದಗಿಸಿದ

ಕನಸುಗಾರಿಕೆ, ಆಶಾವಾದಿತನ, ಆದರ್ಶವಾದಿತನ, ಆಧ್ಯಾತ್ಮಿಕತೆ ಇನ್ನೂ ಮುಂತಾದ ಎಲ್ಲ ವಿಷಯಗಳೂ ಪೋಷಕವಾಗಿಯೇ ಕಂಡವು. ಹಾಗಾಗಿ, ನಮ್ಮದೆನ್ನುವುದೆಲ್ಲವನ್ನು ಗೌರವಿಸುವ, ಕೀರ್ತಿಸುವ ಪುನರ್ ಮೌಲ್ಯೀಕರಿಸುವ ಪರಿಪಾಠವೂ ಬೆಳೆಯಿತು.

ನಾಡು-ನುಡಿಯ ಸಂವೇದನೆಯು ಆಧುನಿಕ ಕನ್ನಡ ಸಾಹಿತ್ಯಕ್ಕೆ ನೀಡಿದ ಮಹತ್ತರವಾದ ಪ್ರೇರಣೆಗಳಲ್ಲೊಂದಾಗಿದ್ದು, ಈ ನಾಡ ಭಕ್ತಿ, ನುಡಿಯ ಪ್ರೇಮವು, ರಾಷ್ಟ್ರೀಯತೆಯ ಒಂದು ಪ್ರಮುಖ ಅಂಗ. ಹಾಗಾಗಿ ಈ ನಾಡುನುಡಿಯ ಹಿರಿಮೆ ಮತ್ತು ಗರಿಮೆಗಳು ನವೋದಯ ಕವಿಗಳಿಗೆ ಸ್ಫೂರ್ತಿಯ ಸೆಲೆಗಳಾದವು. ಈ ನಾಡು-ನುಡಿಯ ಪ್ರೀತಿ, ಪ್ರೇಮ, ಗೌರವ, ಅಭಿಮಾನವು ರಾಷ್ಟ್ರೀಯತೆಯ ಉಪ ರಾಷ್ಟ್ರೀಯ ಪ್ರಜ್ಞೆ ಎಂದರೆ ತಪ್ಪಾಗಲಾರದು. ಅಂದರೆ ಆ ಹೊತ್ತಿನ ಈ ಪ್ರಜ್ಞೆಯು ``ಭೂಮಿಯಲ್ಲಿ ಅಡಗಿಹೋದ ಭವ್ಯ ದೇವಾಲಯವೊಂದು ಮೇಲೆದ್ದು ನಿಂತಹಾಗೆ, ಕನ್ನಡ ಸಂಸ್ಕೃತಿಯ ಭವ್ಯ ಚಿತ್ರವು ಆ ಕಾಲಕ್ಕೆ ನಿಂತಿತು". ರಂ.ಶ್ರೀ.ಮುಗಳಿಯವರ `ಕನ್ನಡ ಸಾಹಿತ್ಯ ಇತಿಹಾಸ' ಎಂಬ ಕೃತಿಯಲ್ಲಿನ ಈ ಮಾತುಗಳು ಉಲ್ಲೇಖನೀಯ. ಇದು ಅಂದು ಸ್ವತಂತ್ರ ಭಾರತದ ಕಲ್ಪನೆಯಂತೆಯೇ ಅಖಂಡ ಕರ್ನಾಟಕದ ಕಲ್ಪನೆಯೂ ಒಂದು ಅದಮ್ಯ ಆದರ್ಶವಾದುದರಲ್ಲಿ ತಪ್ಪೆನಿಸಲಾರದು.

ಅಂತೆಯೇ ಇದು "ಭಾರತೀಯರಿಗೆ ಮತ್ತು ಕನ್ನಡಿಗರಿಗೆ ಲುಪ್ತವಾಗಿದ್ದ ಆತ್ಮಗೌರವವನ್ನು ಮರಳಿ ಸಂಪಾದಿಸಿಕೊಡುವ ಸಲುವಾಗಿ ದೇಶಭಕ್ತಿ, ಭಾಷಾ ಪ್ರೇಮಗಳಂತಹ ಭಾವ ನಿರ್ಭರವಾದ ಸಂಗತಿಗಳನ್ನು ಆರಿಸಿಕೊಳ್ಳುವುದು ಅಂದಿನ ಕವಿಗೆ ಅನಿವಾರ್ಯವಾಯಿತು. ಸಮಾಜದ ಅನುಕ್ತ ಬೇಡಿಕೆಗಳಿಗನುಗುಣವಾಗಿಯೇ ಕ್ರಾಂತದರ್ಶಿಗಳಾದ ಕವಿಗಳು ಕಾವ್ಯ ವಸ್ತುವನ್ನು ಆರಿಸಿಕೊಳ್ಳುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಆದರೆ ದೇಶದ ರಾಜಕೀಯ ಏಕತೆಯು ಸಾಧ್ಯವಾಗದೆ ಹೋಗಿದ್ದಾಗ, ಸಾಂಸ್ಕೃತಿಕ ಏಕತೆಯು ಹಿಂದೂಧರ್ಮದ ಸರ್ವ ಸಮಾನ ಅಂಶಗಳಿಂದಲೇ ರೂಪಿತವಾಗುತ್ತಿದ್ದಾಗ, ರಾಜಕೀಯ ಸ್ಥಳದಲ್ಲಿ ದೇಶ ಭಕ್ತಿಯನ್ನು ಸ್ಥಾಪಿಸುವುದು ಕೂಡ ಹೊಸ ಸಾಧನೆಯಾಗಿತ್ತು[3]". ಅಂದರೆ ಈ ಮಾತು ಅಂದಿನ ವಿವಿಧತೆಯಲ್ಲಿ ಏಕತೆಯನ್ನು ಸಾಧಿಸುವ ಸಮರ್ಥನೆಯಾಗಿದ್ದು ಅದು ಭಾಷೆ ಮತ್ತು ರಾಷ್ಟ್ರೀಯತೆಗಳನ್ನು ಒಂದೇ ನಾಣ್ಯದ ಎರಡು ಮುಖಗಳಾಗಿ ಪರಿಗಣಿಸಿ ತೋರಿಸುವ ಬಗೆಯದ್ದಾಗಿದೆ.

ಕುವೆಂಪುರವರು -``ಕರ್ನಾಟಕ ಮಾತೆಯನ್ನು `ಭಾರತ ಜನನಿಯ ತನುಜಾತೆ` ಎಂದು ಕರೆದಿರುವುದು, ದ.ರಾ.ಬೇಂದ್ರೆಯವರು ಭಾರತ ಮಾತೆಯನ್ನು ಕನ್ನಡ ಕಂದವ್ವನ ಲಾಲಿ[4]" ಎಂದು ಹಾಡಿರುವ ಬಗೆ ಈ ಸಮನ್ವಯತೆಯ ಸಾಧನೆಯೆಂದು ನಾವಿಲ್ಲಿ ಅರಿಯಬಹುದು.

ಈ ದಿಸೆಯಲ್ಲಿ ಬಿ.ಎಂ.ಶ್ರೀ.ಯವರ ಹೆಸರು ತುಂಬ ಮಹತ್ವದ್ದು. ಇವರು ಪಶ್ಚಿಮದ ಸಂವೇದನೆಯ ಮೂಲಕ ಕನ್ನಡ ನಾಡು-ನುಡಿಯನ್ನು ಕಸಿಗೊಳಿಸಿದ ಬಗೆಯು ತುಂಬಾ ಅಪೂರ್ವವಾದುದ್ದಾಗಿದೆ. ಇದನ್ನು ಕುವೆಂಪು, ಬೇಂದ್ರೆಯವರಿಗಿಂತ ಮೊದಲೇ ಇಂಗ್ಲಿಷ್ ಗೀತಗಳಲ್ಲಿ ಮೊತ್ತಮೊದಲು ದಾಖಲಿಸಿ, ವಸ್ತು, ಭಾಷೆ, ಅನುಭವ, ಛಂದಸ್ಸಿನಲ್ಲಿ ಒಂದು ಹೊಚ್ಚ ಹೊಸ ಮಾರ್ಗವನ್ನು ತೆರೆದಿದ್ದಾರೆ. ಬಿಎಂಶ್ರೀಯವರು ಪಾಶ್ಚಾತ್ಯ ಸಾಹಿತ್ಯವನ್ನು ಒಪ್ಪಿಕೊಂಡರೂ ಅವರು ಕನ್ನಡವನ್ನು ಮರೆಯಲಿಲ್ಲ. ಹೀಗೆ ಬಿ.ಎಂ.ಶ್ರೀಯವರಿಗೆ ವಸಾಹತು ಸಂಸ್ಕೃತಿಯ ಕಡೆಗೇ ಹೆಚ್ಚು ಒಲವು ಇದ್ದು, ಅದರ ಅಂಜಿದ ಒಳಮನಸ್ಸಿನಲ್ಲಿ ಅದಮ್ಯ ಕನ್ನಡ ಅಭಿಮಾನ, ಪ್ರೀತಿ ಇತ್ತು ಎಂಬುದನ್ನು ಮರೆಯಲಾಗದು.

ಒಟ್ಟಿನಲ್ಲಿ ಈ ಮೇಲಿನ ಎಲ್ಲಾ ಅಂಶಗಳಿಂದ ನವೋದಯ ಕಾವ್ಯದ ಪ್ರಧಾನ ಲಕ್ಷಣಗಳನ್ನು ಈ ರೀತಿ ಹೇಳಬಹುದು.

೧.ಸಾಮಾನ್ಯ ವಸ್ತು, ಸರಳ ಜನಪರ ಭಾಷೆಯ ಬಳಕೆ ಮತ್ತು ಸಾಮಾನ್ಯ ವಸ್ತುವಿನಲ್ಲೂ ವಿಸ್ಮಯ ಮೂಡಿಸುವ ಪ್ರವೃತ್ತಿ.

೨.ಶ್ರೀ ರಾಮಕೃಷ್ಣ ಪರಮಹಂಸ, ಸ್ವಾಮಿ ವಿವೇಕಾನಂದ, ಮಹಾತ್ಮ ಗಾಂಧೀಜಿ ಇನ್ನೂ ಮೊದಲಾದವರ ಪ್ರಮುಖ ಚಿಂತನೆಯ ಬೆಳಕಿನಲ್ಲಿ ರೂಪಿಸಿ ಕೊಂಡ ತಾತ್ತ್ವಿಕ ಚಿಂತನೆಯನ್ನು, ಅವರು ಕಾವ್ಯದ ಪ್ರಮುಖ ಅಂಶವಾಗಿ ಗಮನಿಸಿದ್ದಾರೆ.

೩.ಸಾಮ್ರಾಜ್ಯ ಶಾಹಿ ಮತ್ತು ವಸಾಹತುಶಾಹಿ ಸಂಸ್ಕೃತಿಯ ವಿರೋಧದಿಂದ ಹೊಸ ಬದುಕಿನ ಮೌಲ್ಯಗಳಿಗೆ ಆದ್ಯತೆ ನೀಡಿದರು.

೪.ರಾಷ್ಟ್ರೀಯತೆ, ನಾಡು-ನುಡಿಯ ಪ್ರೇಮ, ಪ್ರಕೃತಿ ಪ್ರೇಮ ಮತ್ತು ಪ್ರೀತಿ, ಪ್ರಣಯ ಇನ್ನೂ ಮುಂತಾದ ಪ್ರಮುಖ ಅಂಶಗಳು ಅವರ ಕಾವ್ಯದ ಆಕರಗಳಾದವು.

೫. ಸಾಮಾಜಿಕ ವಿಷಮತೆಯನ್ನು ತೊಲಗಿಸುವ, ಸಾಮಾಜಿಕ ನ್ಯಾಯವನ್ನು ಪಡೆಯುವ ದಿಕ್ಕಿನೆಡೆಗೆ ಗಮನಹರಿಸಿದರು.

೬. ಧರ್ಮ, ಆಧ್ಯಾತ್ಮಿಕತೆ ಮತ್ತು ತಾತ್ತ್ವಿಕತೆಗೆ ಸಂಬಂಧಿಸಿದ ಧೋರಣೆ, ನಿಲುವುಗಳು ಕಾವ್ಯದ ಪ್ರಮುಖ ಅಂಶಗಳಾಗಿ ಗಮನಾರ್ಹತೆ ಪಡೆದುಕೊಂಡವು.

೭. ವ್ಯಕ್ತಿ ವಿಶಿಷ್ಟತೆ ಮತ್ತು ವಸ್ತು ನಿಷ್ಠತೆಗಳ ವಿಚಾರಗಳಿಗೆ ಕಾವ್ಯದಲ್ಲಿ ಆದ್ಯತೆ ನೀಡಲಾಯಿತು.

೮. ಹೊಸ ಲಯ, ರೂಪ ಮತ್ತು ಬಂಧಗಳ ಆವಿಷ್ಕಾರಗಳು ಕಾವ್ಯದಲ್ಲಿ ಬೆಳಕನ್ನು ಕಂಡವು.

೯. ವಾಸ್ತವದ ಹಂಬಲ, ಬದುಕಿನ ಪ್ರೀತಿ, ಅದಮ್ಯ ಮಾನವೀಯ ಕಾಳಜಿ, ಜಾತ್ಯತೀತ ಮನೋಧರ್ಮಗಳ ಬಗ್ಗೆ ಸಾಕಷ್ಟು ಒತ್ತು ನೀಡಲಾಯಿತು.

೧೦. ಮಾನವೀಯ ಅಂತಃಕರಣ ಅನುಭವಿಸುತ್ತಲೇ ಆಧ್ಯಾತ್ಮಿಕತೆಯ ಕಡೆಗೂ ಕೈಚಾಚುವ ಹಂಬಲವನ್ನು ಕಾವ್ಯದಲ್ಲಿ ಮೂಡಿಸಿದರು.

೧೧. ಇಂದ್ರಿಯಾನುಭವಗಳಿಗೆ ಬೆಲೆ ಕೊಡುತ್ತಲೇ ಅತೀಂದ್ರಿಯಾನುಭವಗಳನ್ನು ನಂಬುವ, ಅಂತೆಯೇ ವಾಸ್ತವವನ್ನು ನೋಡುತ್ತಲೇ ಆದರ್ಶವನ್ನು ಹಂಬಲಿಸುವುದು ಅವರ ಕಾವ್ಯದ ಒಲವುಗಳಾದವು.

೧೨. ಭಾಷೆಯನ್ನು ಭಾವನಾತ್ಮಕ, ಚಿಂತನಾತ್ಮಕ ಮತ್ತು ವೈಜ್ಞಾನಿಕತೆಯ ದೃಷ್ಟಿಯಿಂದ ದುಡಿಸಿಕೊಳ್ಳುವುದನ್ನು ಮಾಡಿ ತೋರಿಸಿದರು.

ಹೀಗೆ ಹೊಸಗನ್ನಡದಲ್ಲಿ ನವೋದಯ ಕಾವ್ಯ ತನ್ನದೇ ಆದ ಹೆಜ್ಜೆ ಗುರುತುಗಳನ್ನು ಮೂಡಿಸಿದೆ.

## ಅಡಿ ಟಿಪ್ಪಣಿಗಳು

1. ಜಿ.ಎಸ್.ಎಸ್.; ಸಮಗ್ರ ಗದ್ಯ, ಸಂಪುಟ-2 ಪುಟ-217

2. ಅದೇ... ಪುಟ-223

3. ರಾಘುವೇಂದ್ರ ರಾವ್; ಹಾಡೆ ಹಾದಿಯ ತೋರಿತು ಪುಟ-55

4. ಅದೇ

# ಅಧ್ಯಾಯ - ೩

# ವಸಾಹತುಶಾಹಿ ಮತ್ತು ಸ್ವಾತಂತ್ರ್ಯ ಹೋರಾಟ

`ವಸಾಹತು' ಎಂಬ ಪದಕ್ಕೆ `ಅನ್ಯ ದೇಶದವರು ನೆಲೆಸಿರುವ ಪ್ರದೇಶ', ` ಪರಕೀಯರ ಅಧಿಕಾರಕ್ಕೊಳಪಟ್ಟ ಪ್ರದೇಶ' ಎಂದೂ, `ಶಾಹಿ' ಎಂಬ ಶಬ್ದಕ್ಕೆ `ಅಧಿಕಾರ' ಎಂದೂ ಅರ್ಥವಿರುವುದನ್ನು ಕಾಣಬಹುದು. ಬೇರೆ ದೇಶದ ಪ್ರದೇಶಗಳನ್ನು ಆಕ್ರಮಿಸಿಕೊಂಡು, ಅಧಿಕಾರವನ್ನು ಸ್ಥಾಪಿಸುವುದನ್ನು ವಸಾಹತುಶಾಹಿ ಎನ್ನುತ್ತಾರೆ. ವ್ಯಾಪಾರಕ್ಕಾಗಿ ಭಾರತಕ್ಕೆ ಆಗಮಿಸಿದ ವಿದೇಶೀಯರು ಇಲ್ಲಿ ಹೇಗೆ ತಮ್ಮ ನೆಲೆಗಳನ್ನು ಸ್ಥಾಪಿಸಿದರು, ಇವರ ವಿರುದ್ಧ ಭಾರತೀಯರು ಸ್ವಾತಂತ್ರ್ಯ ಹೋರಾಟವನ್ನು ಯಾವ ರೀತಿಯಲ್ಲಿ ನಡೆಸಿದರು ಮತ್ತು ಅದರ ಪರಿಣಾಮಗಳೇನು ಇತ್ಯಾದಿ ವಿಚಾರಗಳನ್ನು ತಿಳಿಯಲಾಗುತ್ತದೆ.

ಭಾರತ ಮತ್ತು ಪಾಶ್ಚಿಮಾತ್ಯ ರಾಷ್ಟ್ರಗಳ ನಡುವೆ ಪ್ರಾಚೀನ ಕಾಲದಿಂದಲೂ ವ್ಯಾಪಾರ ಕ್ಷೇತ್ರದಲ್ಲಿ ಸಂಪರ್ಕವಿದ್ದಿತು. ಭಾರತದ ಸಾಂಬಾರ ಪದಾರ್ಥ ಮತ್ತಿತರ ಐಷಾರಾಮ ವಸ್ತುಗಳಿಗೆ ಯುರೋಪಿನಲ್ಲಿ ಅಧಿಕ ಬೇಡಿಕೆಯಿದ್ದದ್ದರಿಂದ ಕ್ರಿ.ಶ. ೧೫ನೆಯ ಶತಮಾನದ ಅಂತ್ಯದಲ್ಲಿ ಭಾರತಕ್ಕೆ ಯುರೋಪಿಯನ್ನರ ಆಗಮನವಾಯಿತು. ಕ್ರಿ.ಶ. ೧೪೫೩ರಲ್ಲಿ ಕಾನ್‌ಸ್ಟ್ಯಾಂಟಿನೋಪಲ್ ನಗರ ಪತನವಾದ ನಂತರ ವಾಸ್ಕೋಡಗಾಮನು ಜಲಮಾರ್ಗವನ್ನು ಕಂಡುಹಿಡಿದನು. ಇದರಿಂದಾಗಿ ಭಾರತಕ್ಕೆ ವ್ಯಾಪಾರದ ಉದ್ದೇಶವನ್ನಿಟ್ಟುಕೊಂಡು ಪೋರ್ಚುಗೀಸರು, ಡಚ್ಚರು, ಬ್ರಿಟಿಷರು ಮತ್ತು ಫ್ರೆಂಚರು ಬಂದರು. ಇವರು ಆ ದೇಶಗಳ ಸರ್ಕಾರದ ಬೆಂಬಲವನ್ನು ಪಡೆದುಕೊಂಡು ವಾಣಿಜ್ಯ ಕಂಪನಿಗಳ ಮೂಲಕ ವ್ಯಾಪಾರವನ್ನು ಪ್ರಾರಂಭಿಸಿದರು. ಈ ಯೂರೋಪಿನ ವ್ಯಾಪಾರಿ ಕಂಪನಿಗಳ ಉದ್ದೇಶ ವ್ಯಾಪಾರಕ್ಕೆ ಸೀಮಿತವಾಗಿದ್ದರೂ, ಮೊಘಲರ ಕೊನೆಯ ಆಳ್ವಿಕೆಯ ಅವಧಿಯಲ್ಲಿನ ರಾಜಕೀಯ ಅಸ್ಥಿರತೆಯನ್ನು ಮತ್ತು ದೇಶೀಯ ರಾಜರುಗಳ ಕಚ್ಚಾಟದ ಸದುಪಯೋಗವನ್ನು ಪಡೆದುಕೊಂಡು ರಾಜಕೀಯದಲ್ಲಿ ಪ್ರವೇಶಿಸಲಾರಂಭಿಸಿದರು. ಅವರು ತಮ್ಮ ದೇಶದ ವಾಣಿಜ್ಯ ಕಂಪನಿಗಳಿಂದ ಯುದ್ಧ ಮಾಡುವ, ಒಪ್ಪಂದ ಮಾಡಿಕೊಳ್ಳುವ, ರಕ್ಷಣೆಗಾಗಿ ಕೋಟೆಗಳನ್ನು ನಿರ್ಮಿಸಿಕೊಳ್ಳುವ ಹಾಗೂ ಗೆದ್ದ ಪ್ರದೇಶಗಳನ್ನು ವಶಪಡಿಸಿಕೊಂಡು ಆಳ್ವಿಕೆ ಮಾಡುವ `ಸನ್ನದು' ಎಂಬ ಅಧಿಕಾರವನ್ನು ಪಡೆದವು. ಈ `ಸನ್ನದು'ಗಳಿಂದಾಗಿ ಯುರೋಪಿಯನ್ನರಿಗೆ ವ್ಯಾಪಾರದಿಂದಾಗುವ ಲಾಭದ ಜೊತೆಗೆ ಭಾರತವನ್ನು ಆಕ್ರಮಿಸುವ ಹವಣಿಕೆಯೂ ಉಂಟಾಯಿತು. ಇದರ ಪರಿಣಾಮವಾಗಿ ಐರೋಪ್ಯ ರಾಷ್ಟ್ರಗಳ ಕಂಪನಿಗಳ ನಡುವೆಯೇ ಹೋರಾಟ ಪ್ರಾರಂಭವಾಯಿತು. ಬ್ರಿಟೀಷರು ತಮ್ಮ ಪ್ರತಿಸ್ಪರ್ಧಿಗಳಾದ ಪೋರ್ಚುಗೀಸರನ್ನು, ಡಚ್ಚರನ್ನು ಹಾಗೂ ಫ್ರೆಂಚರನ್ನು ವ್ಯಾಪಾರದ ಪೈಪೋಟಿಯಿಂದ ತಪ್ಪಿಸಲು ಹಾಗೂ ಭಾರತದಲ್ಲಿ ಶಾಶ್ವತವಾದ ನೆಲೆಯನ್ನು ಕಂಡುಕೊಳ್ಳುವಲ್ಲಿ ಯಶಸ್ವಿಯಾದರು.

ಭಾರತದ ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಪಾಲ್ಗೊಳ್ಳಲು ಫ್ರೆಂಚ್ ಮತ್ತು ಬ್ರಿಟನ್‌ನ ಈಸ್ಟ್ ಇಂಡಿಯಾ ಕಂಪನಿಗಳ ನಡುವೆ ಸ್ಪರ್ಧೆಯುಂಟಾಯಿತು. ಇವರಿಬ್ಬರ ನಡುವೆ ಮೂರು ಕರ್ನಾಟಿಕ್ ಯುದ್ಧಗಳು ನಡೆದು, ಬ್ರಿಟೀಷರೇ ಮೇಲುಗೈ ಸಾಧಿಸಿ, ಫ್ರೆಂಚರನ್ನು ಸಂಪೂರ್ಣವಾಗಿ ಸೋಲಿಸಿದರು. ಕ್ರಿ.ಶ. ೧೭೫೭ರ ಪ್ಲಾಸಿ ಕದನದಲ್ಲಿ ರಾಬರ್ಟ್ ಕ್ಲೈವ್‌ನು ಸಿರಾಜ್ ಉದ್ ದೌಲನನ್ನು ಹತ್ತಿಕ್ಕುವ ಮೂಲಕ ಬ್ರಿಟೀಷ್ ಸಾಮ್ರಾಜ್ಯವು ಭಾರತದಲ್ಲಿ ಭದ್ರ ಸ್ಥಾನವನ್ನು ಪಡೆದುಕೊಳ್ಳುವಂತಾಯಿತು. ಬಂಗಾಳದಲ್ಲಿ ಸುಭದ್ರವಾಗಿ ನೆಲೆಯೂರಿದ ಬ್ರಿಟಿಷರು ಕ್ರಿ.ಶ. ೧೭೬೪ರಲ್ಲಿ ಬಕ್ಸಾರ್ ಕದನವನ್ನು ಮಾಡುವುದರ ಮೂಲಕ ಮತ್ತಷ್ಟು ಅಧಿಪತ್ಯವನ್ನು

ಸ್ಥಾಪಿಸಿದರು. ಮರಾಠರ ವಿರುದ್ಧ ಯುದ್ಧ ಒಪ್ಪಂದ ಮಾಡಿಕೊಳ್ಳುವುದರ ಮೂಲಕ ರೋಹಿಲ್‌ಖಂಡ, ಸಾಲ್ಸೆಟ್ ಮುಂತಾದ ಪ್ರದೇಶಗಳನ್ನು ಅಧೀನಕ್ಕೆ ಒಳಪಡಿಸಿಕೊಂಡರು. ದಕ್ಷಿಣ ಭಾರತದಲ್ಲಿ ಬ್ರಿಟಿಷರು ತಮ್ಮ ವಿಸ್ತರಣಾ ನೀತಿಯನ್ನು ಮುಂದುವರಿಸಲು ಅನೇಕ ಯುದ್ಧಗಳನ್ನು ಕೈಗೊಳ್ಳಬೇಕಾಯಿತು. ಇಲ್ಲಿ ಬ್ರಿಟಿಷರಿಗೆ ಪ್ರತಿಸ್ಪರ್ಧಿಯಾಗಿ ನಿಂತವರು ಹೈದರಾಲಿ ಮತ್ತು ಟಿಪ್ಪು ಸುಲ್ತಾನರು. ಮೊದಲನೆಯ ಆಂಗ್ಲೋ ಮೈಸೂರು ಯುದ್ಧದಲ್ಲಿ ಹೈದರಾಲಿಗೆ ದೇಶೀಯ ರಾಜರ ಬೆಂಬಲ ಸಿಗದಿದ್ದರೂ, ಅವನು ಆಂಗ್ಲರೊಡನೆ ಯುದ್ಧ ಮಾಡಿದನು. ಹೈದರಾಲಿ ಬ್ರಿಟಿಷರ ಕೇಂದ್ರವಾದ ಮದ್ರಾಸನ್ನು ವಶಪಡಿಸಿಕೊಂಡನು. ಇದರಿಂದ ಹೆದರಿ ಬ್ರಿಟಿಷರು ಮದ್ರಾಸ್ ಒಪ್ಪಂದವನ್ನು ಮಾಡಿಕೊಂಡರು. ಆಕ್ರಮಣ ಪ್ರವೃತ್ತಿಯವರಾದ ಆಂಗ್ಲರು ಎರಡನೆಯ ಆಂಗ್ಲೋ-ಮೈಸೂರು ಯುದ್ಧಕ್ಕೆ ನಿಂತರು. ಇದರಲ್ಲಿ ದೇಶೀಯ ರಾಜರು ಹೈದರಾಲಿಯ ಪರವಾಗಿ ಹೋರಾಡುವುದಾಗಿ ಹೇಳಿದ್ದರೂ, ಆಂಗ್ಲರೊಡನೆ ಒಪ್ಪಂದ ಮಾಡಿಕೊಂಡು ಯುದ್ಧ ಭೂಮಿಯಿಂದ ಹಿಂದಿರುಗಿದರು. ಯುದ್ಧ ಮುಂದುವರಿಸಿದ ಹೈದರಾಲಿ ರಣರಂಗದಲ್ಲೇ ಸಾವನ್ನಪ್ಪಿದನು. ಅವನ ಮಗ ಟಿಪ್ಪು ಸುಲ್ತಾನ್ ಯುದ್ಧ ಮುಂದುವರಿಸಿ ಮಂಗಳೂರನ್ನು ಬ್ರಿಟಿಷರಿಂದ ವಶಪಡಿಸಿಕೊಂಡನು. ಮೂರನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ಸೋಲುವುದರ ಮೂಲಕ `ಶ್ರೀರಂಗಪಟ್ಟಣ ಒಪ್ಪಂದ' ಮಾಡಿಕೊಳ್ಳುವ ಮೂಲಕ ಗೆದ್ದ ಪ್ರದೇಶಗಳನ್ನು ಅವರಿಗೆ ಬಿಟ್ಟುಕೊಡಬೇಕಾಯಿತು. ನಾಲ್ಕನೆಯ ಆಂಗ್ಲೋ-ಮೈಸೂರು ಯುದ್ಧದಲ್ಲಿ ವೀರಾವೇಶದಿಂದ ಹೋರಾಡಿ ಹತನಾದನು. ಇದರಿಂದಾಗಿ ಬ್ರಿಟಿಷರಿಗೆ ಪಶ್ಚಿಮದಲ್ಲಿ ಕೆನರಾ, ದಕ್ಷಿಣದಲ್ಲಿ ಕೊಯಮತ್ತೂರು ಮತ್ತು ಪೂರ್ವದ ಕೆಲವು ಜಿಲ್ಲೆಗಳು ಸೇರಿದವು ಹಾಗೂ ಕೋರಮಂಡಲ ತೀರ ಪ್ರದೇಶದಿಂದ ಮಲಬಾರಿನ ತೀರ ಪ್ರದೇಶದವರೆಗೂ ಚಾಚಿಕೊಂಡಿದ್ದ ಪ್ರದೇಶಗಳು ಬ್ರಿಟಿಷರ ವಶವಾದವು.

ಭಾರತದಲ್ಲಿ ವಸಾಹತುಶಾಹಿ ನೆಲೆಗಳನ್ನು ಸ್ಥಾಪಿಸಲು ಯುದ್ಧದ ಮಾರ್ಗವನ್ನು ಅನುಸರಿಸುವುದರ ಜೊತೆಗೆ ಬ್ರಿಟಿಷ್ ಸರಕಾರದಿಂದ ಭಾರತಕ್ಕೆ ಗವರ್ನರ್ ಜನರಲಾಗಿ ನೇಮಕಗೊಂಡ ಅಧಿಕಾರಿಗಳು ಕೆಲವು ನೀತಿಗಳನ್ನು ಜಾರಿಗೆ ತಂದರು. ಅದರಲ್ಲಿ ಲಾರ್ಡ್ ವೆಲ್ಲೆಸ್ಲಿಯು 'ಸಹಾಯಕ ಸೈನ್ಯ ಪದ್ಧತಿ'ಯನ್ನು ಜಾರಿಗೆ ತಂದನು. ಇದರ ಪ್ರಕಾರ ಅವರಿಗೆ ಅನುಕೂಲವಾದ ಸ್ಥಳವನ್ನಾಯ್ದುಕೊಂಡು, ಆ ಪ್ರದೇಶದ ರಾಜರೊಡನೆ ಒಪ್ಪಂದ ಮಾಡಿಕೊಂಡು ಅಲ್ಲಿ ಬ್ರಿಟಿಷರ ಸೈನ್ಯವನ್ನು ಇಟ್ಟು, ಅದು ದೇಶೀಯ ರಾಜರಿಗೆ ಸಹಾಯ ನೀಡುವ ಭರವಸೆಯಿತ್ತು, ಅವರ ಆಧಿಪತ್ಯವನ್ನು ಒಪ್ಪಿಕೊಂಡಂತೆ ಆ ಸೈನ್ಯದ ಖರ್ಚು ವೆಚ್ಚಗಳನ್ನು ಆ ರಾಜರೇ ನೋಡಿಕೊಳ್ಳುವ ವ್ಯವಸ್ಥೆಯನ್ನು ರೂಢಿಗೆ ತಂದರು.

ಲಾರ್ಡ್ ಡಾಲ್‌ಹೌಸಿಯ `ದತ್ತು ಮಕ್ಕಳಿಗೆ ಹಕ್ಕಿಲ್ಲ' ಎಂಬ ನೀತಿಯಿಂದಾಗಿ ಬ್ರಿಟಿಷರ ಸಾಮ್ರಾಜ್ಯ ಮತ್ತಷ್ಟು ವಿಶಾಲವಾಗಿ ವಿಸ್ತರಿಸಲು ಸಹಾಯವಾಯಿತು. ಈ ನೀತಿಯ ಪ್ರಕಾರ ಈಸ್ಟ್ ಇಂಡಿಯಾ ಕಂಪನಿಯ ಅಧೀನದಲ್ಲಿರುವ ರಾಜ್ಯಗಳು ಕಂಪನಿಯ ಅನುಮತಿಯಿಲ್ಲದೆ ಸಿಂಹಾಸನಕ್ಕೆ ದತ್ತು ಪುತ್ರರನ್ನು ನೇಮಿಸಿಕೊಳ್ಳುವಂತಿರಲಿಲ್ಲ. ಒಂದು ವೇಳೆ ರಾಜನಿಗೆ ಪುತ್ರನಿಲ್ಲದೆ ಮರಣ ಹೊಂದಿದರೆ, ಆ ರಾಜ್ಯವು ಬ್ರಿಟಿಷರ ಸಾಮ್ರಾಜ್ಯಕ್ಕೆ ಸೇರಿ ಹೋಗುತ್ತಿತ್ತು.

ಈ ನೀತಿಗಳಿಂದಾಗಿ ಬ್ರಿಟಿಷರು ಮತ್ತಷ್ಟು ಪ್ರದೇಶಗಳನ್ನು ವಶಪಡಿಸಿಕೊಳ್ಳುವುದರ ಮೂಲಕ ಪ್ರಬಲರಾಗುತ್ತಾ ಹೋದರು. ಇದೆಲ್ಲವುಗಳನ್ನು ಅರಿತ ಭಾರತೀಯ ಜನತೆ ಅಲ್ಲಲ್ಲಿ ಪ್ರತಿಭಟನೆ ತೋರಿಸಿದರೂ ಅವರಲ್ಲಿದ್ದ ಅನೈಕ್ಯತೆಯ ಕಾರಣದಿಂದ ಯಶಸ್ವಿಯಾಗಿರಲಿಲ್ಲ. ಕ್ರಿ.ಶ. ೧೮೫೭ ರಲ್ಲಿ ಸ್ವಲ್ಪ ಮಟ್ಟಿಗೆ ಭಾರತೀಯರು ಒಗ್ಗೂಡಿ ಮೊದಲ ಬಾರಿಗೆ ಬ್ರಿಟಿಷರ ವಿರುದ್ಧ ಒಮ್ಮೆಗೆ

ಧ್ವನಿ ಎತ್ತಿದರು. ಅದೇ `ಪ್ರಥಮ ಸ್ವಾತಂತ್ರ್ಯ ಸಂಗ್ರಾಮ' ಎನಿಸಿತು. ಇದರಿಂದ ಎಚ್ಚೆತ್ತ ಬ್ರಿಟಿಷರು ದಂಗೆಯನ್ನು ಅಡಗಿಸಿ ಭಾರತದ ಆಡಳಿತವನ್ನು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿಯ ಬದಲು ಬ್ರಿಟಿಷ್ ಸರಕಾರವೇ ವಹಿಸಿಕೊಳ್ಳಲು ನಿರ್ಧರಿಸಿತು. ಬ್ರಿಟಿಷ್ ಸರಕಾರ ವೈಸ್‌ರಾಯ್ ಮುಖಾಂತರ ಆಡಳಿತ ನಡೆಸಲು ಪ್ರಾರಂಭಿಸಿತು. ೧೮೮೫ರಲ್ಲಿ ಉದಯವಾದ `ಭಾರತೀಯ ರಾಷ್ಟ್ರೀಯ ಕಾಂಗ್ರೆಸ್' ಭಾರತದ ರಾಜಕೀಯ ಕ್ಷೇತ್ರದಲ್ಲಿ ನೂತನ ಅಧ್ಯಾಯವನ್ನು ತೆರೆಯಿತು. ಇದು ಅಧಿವೇಶನಗಳನ್ನು ನಡೆಸುವುದರ ಮೂಲಕ ಬ್ರಿಟಿಷ್ ಸರಕಾರದಿಂದ ಕೆಲವು ವಿನಾಯಿತಿಗಳನ್ನು ಪಡೆಯುತ್ತಾ ಹೋಯಿತು. ಈ ನಡುವೆ ಭಾರತವು ಸ್ವಾತಂತ್ರ್ಯಕ್ಕಾಗಿ ಚಳವಳಿಯ ರೂಪವನ್ನು ಪಡೆಯಿತು.

ಭಾರತದ ಸ್ವಾತಂತ್ರ್ಯ ಚಳವಳಿಯ ಇತಿಹಾಸವನ್ನು ಅಧ್ಯಯನದ ದೃಷ್ಟಿಯಿಂದ ಮೂರು ಹಂತಗಳಲ್ಲಿ ವಿಭಜಿಸಬಹುದು. ಕ್ರಿ.ಶ. ೧೮೮೫ ರಿಂದ ೧೯೦೫ರ ವರೆಗೆ ಭಾರತದ ಸ್ವಾತಂತ್ರ್ಯ ಚಳವಳಿಯ ಪ್ರಥಮ ಘಟ್ಟದಲ್ಲಿ ಮಂದಗಾಮಿಗಳು ಕಂಡು ಬರುತ್ತಾರೆ. ದಾದಾಬಾಯಿ ನವರೋಜಿ, ಡಬ್ಲ್ಯು.ಸಿ.ಬ್ಯಾನರ್ಜಿ, ಎಸ್.ಎನ್.ಬ್ಯಾನರ್ಜಿ, ಗೋಪಾಲಕೃಷ್ಣ ಗೋಖಲೆ, ಸರ್.ಫಿರೋಜ್ ಷಾ ಮೆಹ್ತಾ, ಮಹದೇವ ಗೋವಿಂದ ರಾನಡೆ, ಮದನ್ ಮೋಹನ್ ಮಾಳವೀಯ ಮುಂತಾದವರು ಮಂದಗಾಮಿ ಪಕ್ಷದ ಹೆಸರಾಂತ ವ್ಯಕ್ತಿಗಳಾಗಿದ್ದು, ಬ್ರಿಟಿಷರ ನಿಸ್ವಾರ್ಥತೆ ಮತ್ತು ನ್ಯಾಯ ಪರತೆಯಲ್ಲಿ ನಂಬಿಕೆಯನ್ನಿಟ್ಟಿದ್ದರು. ರಾಜಕೀಯ ಚಳವಳಿಯ ಕಲ್ಪನೆಯ ಹೊಸದಾದ್ದರಿಂದ ಬ್ರಿಟಿಷರ ಆಕ್ರೋಶವನ್ನು ಕೆರಳಿಸುವ ಯಾವುದೇ ದುಡುಕಿನ ಕಾರ್ಯವನ್ನು ಈ ಹಂತದಲ್ಲಿ ಮಾಡುವುದು ಮೂರ್ಖತನ ಎಂಬುದಾಗಿ ಮಂದಗಾಮಿ ರಾಷ್ಟ್ರೀಯವಾದಿಗಳು ಭಾವಿಸಿದ್ದರು. ಆದ್ದರಿಂದ ಮಂದಗಾಮಿಗಳು ರಾಜಕೀಯ ವಿಷಯಗಳನ್ನು ಚರ್ಚಿಸುತ್ತಾ, ಬೇಡಿಕೆಗಳ ಪಟ್ಟಿಯನ್ನು ಬ್ರಿಟಿಷ್ ಸರಕಾರಕ್ಕೆ ಸಲ್ಲಿಸುತ್ತಾ ಮತ್ತು ಬ್ರಿಟಿಷರಿಗೆ ನಿಷ್ಠೆಯನ್ನು ತೋರಿಸುತ್ತಾ ಅವರ ಲೋಪದೋಷಗಳನ್ನು ಟೀಕಿಸುತ್ತಿದ್ದರು.

ಮಂದಗಾಮಿ ರಾಷ್ಟ್ರೀಯ ವಾದಿಗಳು ಸ್ವದೇಶಿ ವಿಚಾರಗಳನ್ನು ಪ್ರಚುರ ಪಡಿಸಿ ದೇಶೀಯ ವಸ್ತುಗಳ ಉಪಯೋಗಕ್ಕೆ ಕರೆಕೊಟ್ಟರು. ಮಹಾರಾಷ್ಟ್ರ ಮತ್ತು ಪೂನಾ ನಗರಗಳಲ್ಲಿ ವಿ.ಡಿ.ಸಾವರ್‌ಕರ್‌ರವರ ನೇತೃತ್ವದಲ್ಲಿ ವಿದೇಶಿ ಸರಕುಗಳನ್ನು ಸಾರ್ವಜನಿಕವಾಗಿ ಸುಟ್ಟು ಹಾಕಿದರು. ಪರಿಷ್ಕರಿಸಲ್ಪಟ್ಟ ಭೂ ತೆರಿಗೆಯನ್ನು ವಿಧಿಸಬೇಕು ಮತ್ತು ಉಪ್ಪಿನ ಮೇಲಿನ ತೆರಿಗೆಯನ್ನು ತೆಗೆದುಹಾಕಬೇಕೆಂದು ಆಗ್ರಹಿಸಿದರು. ಆಮದು ವಸ್ತುಗಳ ಮೇಲಿನ ಸುಂಕವನ್ನು ತೆಗೆದು ಹಾಕಿದುದರ ಬಗ್ಗೆ ಹಾಗೂ ಹತ್ತಿಯ ಮೇಲೆ ಸುಂಕವನ್ನು ವಿಧಿಸಿದುದರ ವಿರುದ್ಧ ಆಂದೋಲನವನ್ನು ನಡೆಸಿದರು. ಈ ಎಲ್ಲದರ ಪರಿಣಾಮವಾಗಿ ಬ್ರಿಟಿಷ್ ಸರಕಾರ ೧೮೯೨ ರಲ್ಲಿ ಇಂಡಿಯನ್ ಕೌನ್ಸಿಲ್ ಕಾಯ್ದೆಯನ್ನು ಜಾರಿಗೆ ತಂದು ಕೇಂದ್ರ ಶಾಸನ ಸಭೆಗೆ ಮತ್ತು ಪ್ರಾಂತೀಯ ಶಾಸನ ಸಭೆಗಳಿಗೆ ಕಳುಹಿಸುವಂತೆ ಮಾಡಿತು.

ಇದರಿಂದ ಮಂದಗಾಮಿ ರಾಷ್ಟ್ರೀಯ ವಾದಿಗಳಾದ ಸರ್.ಫಿರೋಜ್ ಷಾ ಮೆಹ್ತಾ, ಗೋಪಾಲ ಕೃಷ್ಣ ಗೋಖಲೆ, ಸುರೇಂದ್ರ ನಾಥ ಬ್ಯಾನರ್ಜಿ ಮುಂತಾದವರು ವಿಧಾನ ಮಂಡಲಕ್ಕೆ ಪ್ರವೇಶಿಸುವಂತಾಯಿತು. ಆದರೂ ಕೂಡ ಉದಾರವಾದಿಗಳಾದ ಇವರು ಈ ಶಾಸನವನ್ನು ಭ್ರಮೆಯೆಂದು ತಿರಸ್ಕರಿಸಿ ಶಾಸನ ಸಭೆಗಳಲ್ಲಿ ಇನ್ನೂ ಹೆಚ್ಚಿನ ಪ್ರತಿನಿಧಿಕತ್ವ ಮತ್ತು ಅಧಿಕಾರವನ್ನು ಬಯಸಿದರು. ಒಟ್ಟಾರೆಯಾಗಿ ಭಾರತೀಯರಿಗೆ ಯುರೋಪಿಯನ್ನರ ಮಾದರಿಯಲ್ಲಿ ರಾಜಕೀಯ ಹಕ್ಕುಗಳನ್ನು ಮತ್ತು ನಾಗರಿಕ ಹಕ್ಕುಗಳನ್ನು ಒದಗಿಸುವುದು ಮಂದಗಾಮಿ ರಾಷ್ಟ್ರೀಯ ವಾದಿಗಳ ರಾಜಕೀಯ ಸಿದ್ಧಾಂತದ ಉದ್ದೇಶಗಳಾಗಿದ್ದವು. ಈ ಉದ್ದೇಶಗಳ ಸಾಧನೆಗಾಗಿ

ಮಂದಗಾಮಿಗಳು ಬ್ರಿಟಿಷರ ವಿರುದ್ಧ ದಂಗೆಯೆದ್ದು ಸ್ವಾತಂತ್ರ್ಯವನ್ನು ಪಡೆಯುವ ಮಾರ್ಗವನ್ನು ಬಿಟ್ಟು ಶಾಂತಯುತವಾಗಿ ವರ್ತಿಸಿ ಸ್ವಾತಂತ್ರ್ಯವನ್ನು ಪಡೆಯಲು ಬಯಸಿದರು. ಅಲ್ಲದೆ ಭಾರತೀಯರು ಸ್ವಯಂ ಸರ್ಕಾರವನ್ನು ನಡೆಸಬಲ್ಲರು ಎಂಬ ಅರಿವು ಬ್ರಿಟಿಷರಿಗೆ ಬಂದಾಗ ಭಾರತೀಯರಿಗೆ ಸ್ವಾತಂತ್ರ್ಯವನ್ನು ನೀಡಲು ಹಿಂಜರಿಯುವುದಿಲ್ಲ ಎಂಬುದಾಗಿ ಅಭಿಪ್ರಾಯಪಟ್ಟರು. ಬಂಗಾಳ ವಿಭಜನೆಯಿಂದ ಭಾರತದ ರಾಷ್ಟ್ರೀಯ ಕಾಂಗ್ರೆಸ್ಸಿನಲ್ಲಿ ಒಡಕುಂಟಾಯಿತು. ಅದರಿಂದಾಗಿಯೇ ಮಂದಗಾಮಿ ಮತ್ತು ತೀವ್ರಗಾಮಿ ವರ್ಗಗಳು ಕಂಡು ಬಂದವು.

ಮಂದಗಾಮಿಗಳ ವಿರುದ್ಧವಾಗಿ ಅವರ ನಂತರ ಅಂದರೆ ಕ್ರಿ.ಶ. ೧೯೦೬ ರಿಂದ ೧೯೧೯ರ ವರೆಗಿನ ಅವಧಿಯಲ್ಲಿ ಸ್ವಾತಂತ್ರ್ಯ ಚಳವಳಿಯಲ್ಲಿ ತೀವ್ರಗಾಮಿಗಳು ಕಂಡು ಬರುತ್ತಾರೆ. ಇದೇ ಸ್ವಾತಂತ್ರ್ಯ ಚಳವಳಿಯ ಎರಡನೆಯ ಘಟ್ಟವಾಗಿದೆ. ಬಾಲಗಂಗಾಧರ ತಿಲಕ್, ಅರವಿಂದ್ ಘೋಷ್, ಬಿಪಿನ್ ಚಂದ್ರಪಾಲ್, ಲಾಲಾ ಲಜಪತರಾಯ್ ಮೊದಲಾದವರು ಸ್ವರಾಜ್ಯ, ಸ್ವದೇಶ, ದೇಶೀಯ ಶಿಕ್ಷಣ ಮತ್ತು ವಿದೇಶಿ ಸರಕುಗಳ ಬಹಿಷ್ಕಾರ ಎಂಬ ತತ್ವಗಳನ್ನು ಅನುಷ್ಠಾನಕ್ಕೆ ತಂದು ಭಾರತೀಯರಲ್ಲಿ ಸ್ವಾಭಿಮಾನವನ್ನು ಬಿತ್ತಿದರು. ಸ್ವದೇಶಿ ವಸ್ತುಗಳ ಬಳಕೆ ಮತ್ತು ವಿದೇಶಿ ವಸ್ತುಗಳ ಬಹಿಷ್ಕಾರಕ್ಕೆ ಚಳವಳಿಯನ್ನು ರೂಪಿಸಿದರು. ಈ ಚಳವಳಿಯನ್ನು ಅಡಗಿಸಲು ಬ್ರಿಟನ್ ಸರಕಾರ ಹಲವು ಕ್ರಮಗಳನ್ನು ಕೈಗೊಂಡಿತು. ಅದೇ ೧೯೦೯ರ ಮಿಂಟೋ ಮಾರ್ಲೆ ಕಾಯ್ದೆಯಾಗಿದೆ.

ಭಾರತದ ಸ್ವಾತಂತ್ರ್ಯ ಚಳವಳಿಯಲ್ಲಿ `ಹೋಮ್ ರೂಲ್ ಚಳವಳಿಯು' ಪ್ರಮುಖವಾದುದಾಗಿದೆ. ೧೯೦೭ ರಲ್ಲಿ ಸೂರತ್ ಅಧಿವೇಶನದಲ್ಲಿ ಇಬ್ಭಾಗವಾದಂತಹ ಭಾರತದ ರಾಷ್ಟ್ರೀಯ ಕಾಂಗ್ರೆಸ್ ೧೯೧೬ ರಲ್ಲಿ ಅನಿಬೆಸೆಂಟರ ಆಗಮನದಿಂದ ಮತ್ತೆ ಉಗ್ರಗಾಮಿಗಳು ಮತ್ತು ಮಂದಗಾಮಿಗಳು ಒಂದಾಗುವ ಮೂಲಕ ಭಾರತದ ರಾಷ್ಟ್ರೀಯ ಕಾಂಗ್ರೆಸ್ ಜೊತೆಗೂಡಿತು. ಬಾಲಗಂಗಾಧರ ತಿಲಕ್ ಮತ್ತು ಅನಿಬೆಸೆಂಟ್‌ರವರು ಸೇರಿಕೊಂಡು ಹೋಮ್ ರೂಲ್ ಚಳವಳಿಯನ್ನು ಸಂಘಟಿಸಿದರು. ಬ್ರಿಟನ್‌ನಲ್ಲಿ ಭಾರತಕ್ಕೆ ಆಡಳಿತದಲ್ಲಿ ಸ್ವಾತಂತ್ರ್ಯವನ್ನು ನೀಡಲು ವಿರೋಧಿಸುತ್ತಿದ್ದ ಶಕ್ತಿಗಳ ಚಟುವಟಿಕೆಗಳನ್ನು ತಡೆಯಲು ಅನಿಬೆಸೆಂಟರ ಹೋಮ್‌ರೂಲ್ ಲೀಗ್ ಲಂಡನ್‌ಗೆ ಒಂದು ನಿಯೋಗವನ್ನು ಕಳುಹಿಸಿತು. ಈ ಎಲ್ಲದರ ಪರಿಣಾಮವಾಗಿ ಹೋರಾಟ ಹೊಸ ತಿರುವನ್ನು ಪಡೆಯಿತು. ಹೋಮ್‌ರೂಲ್ ಚಳವಳಿಯ ತೀವ್ರತೆಯಿಂದ ತಪ್ಪಿಸಿಕೊಳ್ಳಲು ಬ್ರಿಟಿಷ್ ಸರಕಾರ ೧೯೧೭ ರಲ್ಲಿ ಹೊರಡಿಸಿದ ಘೋಷಣೆಯ ಹಿನ್ನೆಲೆಯಲ್ಲಿ ೧೯೧೯ ರಲ್ಲಿ ಮಾಂಟೆಗೋ ಚೆಲ್ಸ್‌ಫರ್ಡ್ಸ್ ಸುಧಾರಣೆಗಳನ್ನು ಜಾರಿಗೆ ತಂದಿತು. ಇದು ಜನರ ಅತೃಪ್ತಿಯನ್ನು ನಾಶಗೊಳಿಸುವುದರಲ್ಲಿ ವಿಫಲವಾದುದ್ದರಿಂದ ಜನರು ಹೋರಾಟವನ್ನು ಪ್ರಾರಂಭಿಸಿದರು. ಚಳವಳಿಯನ್ನು ಹತ್ತಿಕ್ಕಲು ಬ್ರಿಟನ್ ಸರಕಾರ ೧೯೧೯ ರಲ್ಲಿ ರೌಲತ್ ಕಾಯ್ದೆಯನ್ನು ಜಾರಿಗೆ ತಂದು ಜಲಿಯನ್ ವಾಲಾಬಾಗ್ ದುರಂತಕ್ಕೆ ದಾರಿಮಾಡಿಕೊಟ್ಟಿತು.

ಭಾರತದ ಸ್ವಾತಂತ್ರ್ಯ ಚಳವಳಿಯ ಮೂರನೆಯ ಹಂತವನ್ನು ಚರಿತ್ರಾಕಾರರು ಗಾಂಧಿಯುಗ ಎಂದು ಕರೆದಿದ್ದಾರೆ. ರಾಷ್ಟ್ರೀಯ ಹಿರಿಮೆ ಗರಿಮೆಗಳ, ಆಸೆ-ನಿರಾಸೆಗಳ ಮತ್ತು ಭಯ ಹಾಗೂ ಕಾತುರಗಳ ವಾತಾವರಣ ನಿರ್ಮಿತವಾದಂತಹ ಸಂದರ್ಭದಲ್ಲಿ ಗಾಂಧೀಜಿಯವರು ರಾಜಕೀಯ ರಂಗವನ್ನು ಪ್ರವೇಶ ಮಾಡಿದರು. ಈ ಅವಧಿಯಲ್ಲಿ ಗಾಂಧೀಜಿಯವರು ಕೈಗೊಂಡ ರಾಜಕೀಯ ಹಾಗೂ ಸಾರ್ವಜನಿಕ ಚಟುವಟಿಕೆಗಳು ದೇಶದ ಸ್ವಾತಂತ್ರ್ಯ ಸಾಧನೆಗೆ ಅತ್ಯಂತ ಉಪಯೋಗಕಾರಿಯಾದುದು. ಗಾಂಧೀಜಿಯವರು ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸಿ ತಮ್ಮ ಅಹಿಂಸಾ ನೀತಿ, ಸತ್ಯಾಗ್ರಹ, ಅಸಹಕಾರ ಮುಂತಾದ ಅಸ್ತ್ರಗಳನ್ನು

ಬ್ರಿಟಿಷರ ವಿರುದ್ಧ ಪ್ರಯೋಗಿಸಿ ಭಾರತವು ಸ್ವಾತಂತ್ರ್ಯ ಪಡೆಯಲು ಶ್ರಮಿಸಿದರು. ಈ ಕಾರಣದಿಂದಾಗಿ ಭಾರತದ ಇತಿಹಾಸದಲ್ಲಿ ೧೯೧೯ ರಿಂದ ೧೯೪೭ರ ವರೆಗಿನ ಕಾಲವನ್ನು 'ಗಾಂಧಿಯುಗ' ಎಂದು ಕರೆಯಲಾಗಿದೆ. ಗಾಂಧೀಜಿಯವರು ದಕ್ಷಿಣ ಆಫ್ರಿಕಾದಲ್ಲಿ ಭಾರತೀಯರಿಗಾಗಿಯೇ ಅಲ್ಲಿನ ಸರ್ಕಾರದ ವಿರುದ್ಧ ಸತ್ಯಾಗ್ರಹ ಮತ್ತು ಅಹಿಂಸಾ ಮಾರ್ಗದ ಮೂಲಕ ವರ್ಣಭೇದ ನೀತಿಯ ವಿರುದ್ಧ ಹೋರಾಡಿ ಒಳ್ಳೆಯ ಫಲವನ್ನು ಪಡೆದಿದ್ದರು. ಆ ನೀತಿಯನ್ನೇ ಇಲ್ಲೂ ಮುಂದುವರಿಸಿ ಸಫಲರಾದರು.

ಗಾಂಧೀಜಿಯವರು ಭಾರತದಲ್ಲಿ ಪ್ರಥಮ ಭಾರಿಗೆ ಬಿಹಾರದ ಚಂಪಾರಾಣ್ಯ ಚಳವಳಿಯಲ್ಲಿ ಸತ್ಯಾಗ್ರಹವನ್ನು ಅಸ್ತ್ರವಾಗಿ ಬಳಸಿಕೊಂಡು ಬಡ ರೈತರಿಗೆ ನ್ಯಾಯ ದೊರಕಿಸಿದರು. ಅಹಮದಬಾದಿನಲ್ಲಿ ಬಟ್ಟೆ ಗಿರಣಿಯ ಮಾಲೀಕರು ಮತ್ತು ಕಾರ್ಮಿಕರ ನಡುವೆ ವೇತನಕ್ಕಾಗಿ ಪ್ರಾರಂಭಗೊಂಡ ಚಳವಳಿಯಲ್ಲಿ ಭಾಗವಹಿಸಿ ೨೧ ದಿನಗಳ ಉಪವಾಸ ಸತ್ಯಾಗ್ರಹವನ್ನು ಮಾಡುವುದರ ಮೂಲಕ ಗಾಂಧೀಜಿ ಚಳವಳಿಯಲ್ಲಿ ಜಯಗಳಿಸಿದರು. ೧೯೧೯ರಲ್ಲಿ ಜಾರಿಗೆ ತಂದ ರೌಲತ್ ಕಾಯ್ದೆಯನ್ನು ವಿರೋಧಿಸಿ ಜನತೆಯನ್ನು ಪಂಜಾಬಿನ ಅಮೃತ್‌ಸರ್ ಜಿಲ್ಲೆಯ ಜಲಿಯನ್ ವಾಲಾಬಾಗ್‌ನಲ್ಲಿ ಭಾರತೀಯರು ಶಾಂತಿಯುತವಾಗಿ ಸಭೆ ಸೇರಿದ್ದಾಗ ಬ್ರಿಟಿಷ್ ಜನರಲ್ ಡಯರ್‌ನ ಆದೇಶದ ಮೇರೆಗೆ ಬ್ರಿಟಿಷ್ ಸೈನ್ಯ, ಸಭೆಯ ಮೇಲೆ ಗುಂಡು ಹಾರಿಸಿತು. ಇದೇ ಜಲಿಯನ್ ವಾಲಾಬಾಗ್ ದುರಂತ. ೧೯೨೦ ರಲ್ಲಿ ಗಾಂಧಿಯವರ ನೇತೃತ್ವದಲ್ಲಿ ಭಾರತೀಯರು ಅಸಹಕಾರ ಚಳವಳಿಯನ್ನು ನಡೆಸಿದರು. ಜಲಿಯನ್ ವಾಲಾಬಾಗ್ ದುರಂತದಿಂದ ನೊಂದ ಗಾಂಧಿಯವರು ಬ್ರಿಟಿಷರ ಅನ್ಯಾಯ ಅಕ್ರಮಗಳನ್ನು ಸರಿಪಡಿಸಲು ಸತ್ಯಾಗ್ರಹವೊಂದೇ ಸೂಕ್ತ ಮಾರ್ಗವೆಂದು ಸಾರಿದರು ಮತ್ತು ಅನುಸರಿಸಿದರು. ಇದೇ ಸಂದರ್ಭದಲ್ಲಿ ಮುಸಲ್ಮಾನರು ಬ್ರಿಟಿಷರ ವಿರುದ್ಧ ಖಿಲಾಫತ್ ಚಳವಳಿಯನ್ನು ಹೂಡಿದರು. ಈ ಚಳವಳಿ ತಾತ್ಕಾಲಿಕವಾಗಿ ಹಿಂದೂ ಮುಸಲ್ಮಾರನ್ನು ಒಂದುಗೂಡಿಸಿತು. ಗಾಂಧಿಯವರ ಈ ಅಸಹಕಾರ ಚಳವಳಿ ಬ್ರಿಟಿಷ್ ಸರ್ಕಾರದ ವಿರುದ್ಧ ಅಹಿಂಸಾತ್ಮಕವಾಗಿ ಹೋರಾಡಿ ಬ್ರಿಟೀಷರನ್ನು ಭಾರತದಿಂದ ಹೊರಹಾಕುವ ಘನ ಉದ್ದೇಶವನ್ನು ಹೊಂದಿತ್ತು. ಇದರ ಪರಿಣಾಮವಾಗಿ ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಿಂದ, ವಕೀಲರು ನ್ಯಾಯಾಲಯಗಳಿಂದ ಹೊರ ಬಂದು ಭಾಗವಹಿಸಿದರು. ವಿದೇಶಿ ವಸ್ತುಗಳನ್ನು ಸಾರ್ವಜನಿಕವಾಗಿ ಸುಟ್ಟು ಹಾಕಿದರು. ಇದಕ್ಕೆ ಮಣಿಯದುದನ್ನು ಕಂಡು ಮಂತ್ರಿಸಿದರೆ ಮಾವಿನ ಕಾಯಿ ಬೀಳುವುದೇ ಎಂದು ಅಪಹಾಸ್ಯ ಮಾಡಿದಾಗ, ಗಾಂಧಿಯವರು ಭಾರತ ಖಡ್ಗವನ್ನೆತ್ತಿದರೆ ಕ್ಷಣಿಕ ವಿಜಯ ಸಿಗಬಹುದು. ಆದರೆ ಭಾರತ ಶಾಶ್ವತ ಜಯ ಪಡೆಯುವಂತಾಗಬೇಕೆಂದು ಮುನ್ನಡೆದರು.

೧೯೨೦ರಲ್ಲಿ ಬ್ರಿಟಿಷರು ಉಪ್ಪನ್ನು ರಾಷ್ಟ್ರೀಕರಣ ಮಾಡಿ ಕೊಂಡಾಗ ಉಪ್ಪಿನ ಸತ್ಯಾಗ್ರಹವನ್ನು ಗಾಂಧಿಯವರು ಕೈಗೊಂಡರು. ಸಮುದ್ರದ ದಡದಲ್ಲಿದ್ದ ಉಪ್ಪನ್ನು ಎತ್ತಿಕೊಳ್ಳುವುದರ ಮೂಲಕ ಉಪ್ಪಿನ ಸತ್ಯಾಗ್ರಹವನ್ನು ಆರಂಭಿಸಿದರು. ಗಾಂಧೀಜಿಯವರು ಸಾಂಕೇತಿಕವಾಗಿ ಉಪ್ಪಿನ ಕಾನೂನನ್ನು ಉಲ್ಲಂಘಿಸಿದ ಮೇಲೆ, ದೇಶದಾದ್ಯಂತ ಉಪ್ಪಿನ ಸತ್ಯಾಗ್ರಹ ನಡೆಸಬೇಕೆಂದು ಕರೆ ಕೊಟ್ಟರು. ಉಪ್ಪಿನ ಸತ್ಯಾಗ್ರಹದ ಜೊತೆಗೆ ವಿದೇಶಿ ವಸ್ತುಗಳ ಬಹಿಷ್ಕಾರ ಮತ್ತು ಸಾರಾಯಿ ಅಂಗಡಿಗಳ ಮುಂದೆ ಸ್ತ್ರೀಯರು ಸೇರಿ ಪಿಕೆಟಿಂಗ್ ಮಾಡುವುದು ಮುಂತಾದವುಗಳನ್ನು ಕೈಗೊಳ್ಳಲಾಯಿತು.

೧೯೩೦ರ ಡಿಸೆಂಬರ್ ೧೪ ರಂದು ಮೊದಲನೆ ದುಂಡು ಮೇಜಿನ ಸಮ್ಮೇಳನ ನಡೆಯಿತು. ಈ ಸಂದರ್ಭದಲ್ಲಿ ಭಾರತ ರಾಷ್ಟ್ರೀಯ ಕಾಂಗ್ರೆಸ್ಸಿನ ನಾಯಕರುಗಳು ಸೆರೆಮನೆಯಲ್ಲಿದ್ದರು. ಬ್ರಿಟಿಷ್ ಸರ್ಕಾರ ಬೇರೆ ಬೇರೆ ಪಕ್ಷಗಳ ಅಪಾಯಕಾರಿಯಲ್ಲದ

ಮುಖಂಡರನ್ನು ಮತ್ತು ರಾಜ ಪ್ರತಿನಿಧಿಗಳನ್ನು ಸಮ್ಮೇಳನಕ್ಕೆ ಆಹ್ವಾನಿಸಿತು. ಈ ಸಮ್ಮೇಳನದ ಫಲವಾಗಿ ಭಾರತವು ಸಂಯುಕ್ತ ರಾಜ್ಯವಾಗಿರಬೇಕೆಂದು ಹೆಚ್ಚಿನ ಜನರು ಒಪ್ಪಿಕೊಂಡರು. ಕೇಂದ್ರಕ್ಕೆ ಭಾಗಶಃ ಹೊಣೆಗಾರಿಕೆಯನ್ನು ಕೊಡುವುದಕ್ಕೆ ಸಮ್ಮತಿಸಲಾಯಿತು. ಇದರಲ್ಲಿ ಅಲ್ಪ ಸಂಖ್ಯಾತರು ಮಾತ್ರ ಭಾಗವಹಿಸಿದ್ದರಿಂದ ಈ ಸಮ್ಮೇಳನದಲ್ಲಿ ಕಾಂಗ್ರೆಸ್ ಭಾಗವಹಿಸಬೇಕೆಂಬ ಉದ್ದೇಶದಿಂದ ಗಾಂಧೀಜಿಯವರೊಂದಿಗೆ ಇರ್ವಿನ್ ಒಪ್ಪಂದಕ್ಕೆ ಬಂದರು. ಈ ಹಿನ್ನಲೆಯಲ್ಲಿ ಎರಡನೆ ದುಂಡು ಮೇಜಿನ ಸಮ್ಮೇಳನ ೧೯೩೧ರ ಸೆಪ್ಟೆಂಬರ್ ೭ ರಂದು ಆರಂಭವಾಯಿತು. ಮಹಾತ್ಮಗಾಂಧಿ ಕಾಂಗ್ರೆಸ್ಸಿನ ಏಕ ಮೇವ ಪ್ರತಿನಿಧಿಯಾಗಿ ಈ ಸಮ್ಮೇಳನದಲ್ಲಿ ಭಾಗವಹಿಸಿ ರಾಷ್ಟ್ರೀಯ ಕಾಂಗ್ರೆಸ್ ಇಡೀ ಭಾರತವನ್ನು ಪ್ರತಿನಿಧಿಸುತ್ತದೆ ಎಂದೂ, ಕಾಂಗ್ರೆಸ್ ಕೋಮು ಸಂಘಟನೆಯಾಗಿರದೆ ಎಲ್ಲಾ ವರ್ಗಗಳನ್ನು ಪ್ರತಿನಿಧಿಸುವ ಒಂದು ಸಂಘಟನೆಯಾಗಿದೆ ಎಂದರು. ಇದು ಫಲ ಕೊಡದೇ ಇದ್ದುದರಿಂದ ಮೂರನೇ ದುಂಡುಮೇಜಿನ ಸಮ್ಮೇಳನ ನಡೆಯಿತು. ಇದರಲ್ಲೂ ಭಾರತದ ಸ್ವಾತಂತ್ರ್ಯಕ್ಕೆ ಸಂಬಂಧಿಸಿದ ಯಾವುದೇ ಕಾಯಿದೆಯನ್ನು ಹೊರಡಿಸಲಿಲ್ಲ.

ಭಾರತದ ಕೋಮುವಾದ, ರಾಷ್ಟ್ರೀಯತೆ, ಬ್ರಿಟಿಷ್ ಸಾಮ್ರಾಜ್ಯಶಾಹಿ, ಭಾರತೀಯ ರಾಜರು ಇವರೆಲ್ಲರ ಪ್ರೇರಣೆಯಿಂದ ೧೯೩೫ರ ಕಾಯ್ದೆ ರೂಪುಗೊಂಡಿತು. ಇದು ಭಾರತದ ಸಂವಿಧಾನಕ್ಕೆ ಒಂದು ನಿರ್ದಿಷ್ಟ ಸ್ವರೂಪವನ್ನು ನೀಡಿತು. ಈ ಕಾಯ್ದೆ ಭಾರತದಲ್ಲಿ ಸಾರ್ವತ್ರಿಕ ಚುನಾವಣೆಗಳನ್ನು ನಡೆಸಿ ಜವಾಬ್ದಾರಿ ಸರ್ಕಾರ ರಚನೆಗೆ ಅವಕಾಶ ಮಾಡಿಕೊಟ್ಟಿತು. ೧೯೪೨ರ ಜುಲೈ ೧೪ ರಂದು ವಾರ್ದದಲ್ಲಿ ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಸಭೆ ಸೇರಿ ಕ್ರಿಪ್ಸ್‌ನ ವರದಿಯನ್ನು ಸಂಪೂರ್ಣವಾಗಿ ತಿರಸ್ಕರಿಸುವಂತೆಯೂ, ಅದು ಭಾರತೀಯರನ್ನು ಒಡೆದು ಆಳುವ ಬ್ರಿಟಿಷ್ ಸರಕಾರದ ಭೇದೋಪಾಯದ ನೀತಿಯೆಂದು ಅರಿತು ದ್ವಿತೀಯ ಮಹಾಯುದ್ಧದ ಸಮಯದಲ್ಲಿ ಸಂಪೂರ್ಣ ಸ್ವಾತಂತ್ರ್ಯ ಗಳಿಸಬಹುದೆಂದು ಬ್ರಿಟಿಷ್ ಸರಕಾರದ ಮೇಲೆ ಒತ್ತಡ ಹೇರಿದರು. ಕಾಂಗ್ರೆಸ್ ಕಾರ್ಯಕಾರಿ ಸಮಿತಿ ಬ್ರಿಟಿಷ್ ಸರ್ಕಾರಕ್ಕೆ ೨೪ ದಿನಗಳ ಕಾಲಾವಕಾಶ ನೀಡಿದುದಲ್ಲದೆ, ಗಾಂಧೀಜಿಯವರು ೧೯೪೨ರ ಜುಲೈ ೧೫ ರಂದು ವಿದೇಶಿ ಪತ್ರಿಕೆಗೆ ನೀಡಿದ ಸಂದೇಶದಲ್ಲಿ `ಇದೊಂದು ಶಾಂತಿಯುತ ಮತ್ತು ಅಹಿಂಸೆಯ ಹೋರಾಟವೆಂದರು'.

ಬ್ರಿಟಿಷ್ ಪ್ರಧಾನಿ ಅಟ್ಲೆ ೧೯೪೭ ಫೆಬ್ರವರಿ ೨೦ ರಂದು ಭಾರತದ ವಿಷಯಗಳಿಗೆ ಸಂಬಂಧಿಸಿದ ಘೋಷಣೆಯನ್ನು ಹೊರಡಿಸಿದರು. ಬ್ರಿಟಿಷ್ ಪಾರ್ಲಿಮೆಂಟ್‌ನ ಜವಾಬ್ದಾರಿಯನ್ನು ಹೊಂದಿದ್ದು, ಭಾರತೀಯರಿಗೆ ೧೯೪೮ರ ಜೂನ್ ವೇಳೆಗೆ ಅಧಿಕಾರವನ್ನು ವರ್ಗಾವಣೆ ಮಾಡುವುದಾಗಿ ಸಾಮಾನ್ಯ ಸಭೆಯಲ್ಲಿ ಹೇಳಿಕೆಯೊಂದನ್ನು ನೀಡಿದರು. ಅಲ್ಲದೆ ಲಾರ್ಡ್ ಮೌಂಟ್ ಬ್ಯಾಟನ್‌ನನ್ನು ವೇವಲ್ಲಿನ ಉತ್ತರಾಧಿಕಾರಿಯನ್ನಾಗಿ ನೇಮಿಸಿ ಭಾರತೀಯರಿಗೆ ಅಧಿಕಾರ ಹಸ್ತಾಂತರವನ್ನು ಮಾಡುವ ಉಸ್ತುವಾರಿಯನ್ನು ವಹಿಸಲಾಯಿತು.

ಬ್ರಿಟಿಷ್ ಸರ್ಕಾರದ ಖಚಿತವಾದ ಉದ್ದೇಶ ಜವಾಬ್ದಾರಿಯುತವಾದ ಭಾರತೀಯರ ಕೈಗೆ ಆಡಳಿತಾಧಿಕಾರಿಯನ್ನು ೧೯೪೮ ರ ಜೂನ್‌ಗಿಂತ ಮೊದಲೇ ಶಾಂತಿಯುತವಾಗಿ ವರ್ಗಾಯಿಸಲಾಗುವುದು ಎಂದು ಘೋಷಿಸಿದರು. ಬ್ರಿಟಿಷ್ ಸರ್ಕಾರ ಜೂನ್ ೩, ೧೯೪೭ ರಂದು ಭಾರತವನ್ನು ವಿಭಜಿಸುವ ಯೋಜನೆಯನ್ನು ಸಂಸತ್ತಿನಲ್ಲಿ ಘೋಷಿಸಿತು. ಈ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಬ್ರಿಟಿಷ್ ಪಾರ್ಲಿಮೆಂಟ್ ೧೯೪೭ ರಲ್ಲಿ ಸ್ವಾತಂತ್ರ್ಯ ಅಧಿನಿಯಮವನ್ನು ಜಾರಿಗೆ ತಂದಿತು. ಜುಲೈ ೧೮, ೧೯೪೭ ರಂದು ಬ್ರಿಟಿಷ್ ರಾಜನ ಒಪ್ಪಿಗೆಯನ್ನು ಪಡೆಯಿತು. ಇದೆಲ್ಲದರ ಪರಿಣಾಮವಾಗಿ ೧೯೪೭ರ ಆಗಸ್ಟ್ ೧೫ ರಂದು ಭಾರತ ಸ್ವಾತಂತ್ರ್ಯವನ್ನು ಪಡೆಯಿತು. ಹೀಗೆ ಭಾರತವು ಬ್ರಿಟಿಷರ ವಿರುದ್ಧ ಹೋರಾಡಿ ಜಯಗಳಿಸಿದುದರ ಸವಿ ನೆನಪಿಗಾಗಿ ಆಗಸ್ಟ್ ೧೫ನೆಯ ದಿನವನ್ನು ಸ್ವಾತಂತ್ರ್ಯ ದಿನವನ್ನಾಗಿ ಆಚರಿಸಲಾಗುತ್ತಿದೆ.

## ಕರ್ನಾಟಕದಲ್ಲಿ ಸ್ವಾತಂತ್ರ್ಯ ಚಳವಳಿ

ಕರ್ನಾಟಕದಲ್ಲಿ ಭಾರತದ ಸ್ವಾತಂತ್ರ್ಯ ಹೋರಾಟಕ್ಕೆ ಉತ್ಕಟ ಸ್ವಾತಂತ್ರ್ಯ ಪ್ರೇಮಿಗಳು, ದೇಶಾಭಿಮಾನಿಗಳು, ವೀರ ವನಿತೆಯರೂ ಹೋರಾಟದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ಕರ್ನಾಟಕದಲ್ಲಿ ಬ್ರಿಟಿಷರ ಪ್ರಭುತ್ವದ ವಿರುದ್ಧ ದಿಟ್ಟ ಹೋರಾಟ ನಡೆಸಿದವರಲ್ಲಿ ಹೈದರಾಲಿ ಮೊದಲಿಗ. ಈತ ರಣರಂಗದ ಮಧ್ಯೆದಲ್ಲಿ ಯೇ ಅಕಾಲಿಕ ಮರಣ ಹೊಂದಿದ. ಅವರ ಮಗ ಟಿಪ್ಪುಸುಲ್ತಾನ್ ಯುದ್ಧ ಮುಂದುವರಿಸಿದನು. ಬ್ರಿಟಿಷರ ಚಾಣಾಕ್ಷ್ಯ ನೀತಿ, ದೈತ್ಯ ಬಲದ ಮುಂದೆ ಹಾಗೂ ದೇಶೀಯ ರಾಜರಲ್ಲಿನ ಒಗ್ಗಟ್ಟಿನ ಅಭಾವದಿಂದಾಗಿ ಟಿಪ್ಪು ಸೋತು ಮರಣ ಹೊಂದಿದ. ಟಿಪ್ಪುವಿನ ಪತನಾ ನಂತರ ಇಡೀ ಮೈಸೂರು ಸಂಸ್ಥಾನವನ್ನು ವಶಪಡಿಸಿಕೊಂಡ ಬ್ರಿಟಿಷರು ತಮ್ಮ ಅನುಕೂಲಕ್ಕೆ ತಕ್ಕಂತೆ ಅದನ್ನು ಛಿದ್ರಗೊಳಿಸಿದರು. ಕರ್ನಾಟಕ ಒಟ್ಟಾರೆ ವಸಾಹತುಶಾಹಿ ಆಕ್ರಮಣಕ್ಕೆ ತುತ್ತಾಗಿ ಬ್ರಿಟಿಷರ ಅಧೀನವಾಯಿತು. ಇವರ ದಮನಕಾರಿ ನೀತಿಯ ಆಡಳಿತದಿಂದಾಗಿ ಜನರಲ್ಲಿ ಅಸಮಧಾನ ಮತ್ತು ಅತೃಪ್ತಿಗಳುಂಟಾಗಿ, ಅನೇಕ ಕಡೆ ಸಶಸ್ತ್ರ ಬಂಡಾಯ ಕಾಣಿಸಿಕೊಂಡಿತು.

ಬ್ರಿಟಿಷ್ ಆಳ್ವಿಕೆಯ ವಿರುದ್ಧ ಕರ್ನಾಟಕದಲ್ಲಿ ಕಾಣಿಸಿದ ಮೊದಲ ಸಶಸ್ತ್ರ ಬಂಡಾಯ ಕ್ರಿ.ಶ. ೧೮೦೦ ಧೋಂಡಿಯ ವ್ಯಾಘನದು. ದತ್ತು ಮಕ್ಕಳಿಗೆ ಹಕ್ಕಿಲ್ಲವೆಂಬ ಬ್ರಿಟಿಷ್ ನೀತಿಯ ವಿರುದ್ಧ ಕ್ರಿ.ಶ. ೧೮೨೪ ರಲ್ಲಿ ತಿರುಗಿಬಿದ್ದ ಕಿತ್ತೂರು ರಾಣಿ ಚನ್ನಮ್ಮನ ಹೋರಾಟ ಗಮನಾರ್ಹವಾದುದು. ಕಿತ್ತೂರು ಸೇನೆಯಲ್ಲಿ ಸೇವೆ ಸಲ್ಲಿಸುತ್ತಿದ್ದ ಸಂಗೊಳ್ಳಿ ರಾಯಣ್ಣನ ಪ್ರತಿಭಟನೆಗೆ, ಕುಂಸಿಯ ಸದರಮಲ್ಲನ ಬಿದನೂರು ದಂಗೆ, ಕ್ರಿ.ಶ. ೧೮೩೭ ರಿಂದ ೩೭ ರ ವರೆಗೆ ನಡೆದ ಕೊಡಗಿನ ಬಂಡಾಯಗಳು ಇದಕ್ಕೆ ಉತ್ತಮ ನಿದರ್ಶನವಾಗಿವೆ. ಬ್ರಿಟಿಷರ ವಿರುದ್ಧ ಭಾರತ ನಡೆಸಿದ ಕ್ರಿ.ಶ. ೧೮೫೭ರ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದಲ್ಲೂ ಕರ್ನಾಟಕದ ಹಲವೆಡೆ ತೀವ್ರತರ ಪ್ರತಿಭಟನೆಗಳು ಮತ್ತು ಬಂಡಾಯಗಳು ಕಂಡು ಬಂದವು. ಅವುಗಳಲ್ಲಿ ಮುಖ್ಯವಾಗಿ ಬಿಜಾಪುರ ಜಿಲ್ಲೆಯ ಮುಧೋಳ ತಾಲೂಕಿನ ಹಲಗಲಿಯ ಬೇಡರ ದಂಗೆ, ಸುರಪುರದ ವೆಂಕಟಪ್ಪನಾಯಕನ ಬಂಡಾಯ, ನರಗುಂದದ ಬಾಬಾ ಸಾಹೇಬನ ಪ್ರತಿಭಟನೆ, ಮುಂಡರಗಿ ಭೀಮರಾಯರ ದಂಗೆಗಳನ್ನು ಉದಾಹರಿಸಬಹುದಾಗಿದೆ.

೧೯ನೆಯ ಶತಮಾನದಲ್ಲಿ ನಡೆದ ಧಾರ್ಮಿಕ ಮತ್ತು ಸಾಮಾಜಿಕ ಚಳವಳಿಗಳು ಭಾರತವನ್ನು ನವೋದಯದತ್ತ ಮುನ್ನೆಡೆಸಿದವು. ಪರಿಣಾಮವಾಗಿ ಭಾರತೀಯರಲ್ಲಿ ರಾಷ್ಟ್ರೀಯ ಪ್ರಜ್ಞೆ ಜಾಗೃತಗೊಂಡು ಕ್ರಿ.ಶ. ೧೮೮೫ ರಲ್ಲಿ `ಭಾರತೀಯ ರಾಷ್ಟ್ರೀಯ ಕಾಂಗ್ರೆಸ್'ನ ಸ್ಥಾಪನೆಗೂ ಕಾರಣವಾಯಿತು. ರಾಷ್ಟ್ರೀಯವಾದಿಗಳು ಭಾರತದ ಸ್ವತಂತ್ರ ಚಳವಳಿಯನ್ನು ವ್ಯವಸ್ಥಿತವಾಗಿ ಹಾಗೂ ಪರಿಣಾಮಕಾರಿಯಾಗಿ ಈ ರಾಷ್ಟ್ರೀಯ ಕಾಂಗ್ರೆಸ್‌ನ ಮುಖಾಂತರ ಭಾರತೀಯರನ್ನು ಸಂಘಟಿಸುವಲ್ಲಿ ಹಾಗೂ ಭಾರತೀಯರ ಸಮಸ್ಯೆಗಳತ್ತ ಬ್ರಿಟಿಷರ ಗಮನ ಸೆಳೆಯುವ ಪ್ರಯತ್ನವನ್ನು ಮಾಡತೊಡಗಿದರು. ಕ್ರಿ.ಶ. ೧೮೮೫ರ ನಂತರ ಕರ್ನಾಟಕ ಸ್ವಾತಂತ್ರ್ಯ ಆಂದೋಲನವು ಭಾರತದ ರಾಷ್ಟ್ರೀಯ ಸ್ವಾತಂತ್ರ್ಯ ಚಳವಳಿಯೊಂದಿಗೆ ಏಕ ಪ್ರವಾಹವಾಗಿ ಹರಿಯುವುದು ಕಂಡು ಬರುತ್ತದೆ. ಕನ್ನಡಿಗರು ೨೦ ಕ್ಕೂ ಹೆಚ್ಚು ಆಡಳಿತಗಳಲ್ಲಿ ಹಂಚಿಹೋಗಿದ್ದರಿಂದ ರಾಷ್ಟ್ರೀಯ ಕಾಂಗ್ರೆಸ್ಸಿನ ಪ್ರಾರಂಭದ ಚಟುವಟಿಕೆಗಳಲ್ಲಿ ಅಧಿಕಾರ ಸಂಖ್ಯೆಯಲ್ಲಿ ಭಾಗವಹಿಸಲು ಸಾಧ್ಯವಾಗಿರಲಿಲ್ಲವೆಂದು ಹೇಳಲಾಗುತ್ತದೆ. ಆದರೂ ಸ್ವಾತಂತ್ರ್ಯ ಪ್ರೇಮಿಗಳು ದೇಶಾಭಿಮಾನಿಗಳಾದ ಅನೇಕ ಕನ್ನಡಿಗರು ಕಾಂಗ್ರೆಸ್ಸಿನ ಅಧಿವೇಶನ ಮತ್ತು ಚಳವಳಿಯಲ್ಲಿ ಭಾಗವಹಿಸಿದ್ದರು.

ಕನ್ನಡಿಗರಲ್ಲಿ ರಾಷ್ಟ್ರೀಯ ಪ್ರಜ್ಞೆ ಬೆಳೆಯಲು ಪಂಜೆ ಮಂಗೇಶರಾಯರು, ಆಲೂರು ವೆಂಕಟರಾವ್, ಗಳಗನಾಥ, ಹಟ್ಟಿಯಂಗಡಿ

ನಾರಾಯಣರಾವ್, ಕೆ.ವಾಸುದೇವಾಚಾರ್ಯ, ಬಿ.ವೆಂಕಟಾಚಾರ್ಯ ಮೊದಲಾದ ಬರಹಗಾರರ ಬರಹಗಳು ಪರಿಣಾಮಕಾರಿ ಪ್ರಭಾವ ಬೀರಿವೆ. ನವೋದಯ ಕಾವ್ಯ ಭಾರತೀಯರಲ್ಲಿ ರಾಷ್ಟ್ರೀಯ ಪ್ರಜ್ಞೆ, ಸ್ವಾತಂತ್ರ್ಯ ಹೋರಾಟಕ್ಕೆ ಉತ್ಸಾಹವನ್ನು ತುಂಬಿತು. ಅಲ್ಲದೆ ಕವಿಗಳೂ ಹೋರಾಟದಲ್ಲಿ ಭಾಗವಹಿಸಿ ಮಾದರಿಯಾದರು. ಈ ನಿಟ್ಟಿನಲ್ಲಿ ಅಂದಿನ ಅನೇಕ ವೃತ್ತ ಪತ್ರಿಕೆಗಳು ಕಾರ್ಯ ನಿರ್ವಹಿಸಿವೆ. `ರಾಜಹಂಸ', `ಕರ್ನಾಟಕ ವೃತ್ತ',`ವಿಜಯ',` ಸ್ವದೇಶಾಭಿಮಾನಿ',`ವೃತ್ತಾಂತ ಚಿಂತಾಮಣಿ' ಮುಂತಾದ ಪತ್ರಿಕೆಗಳು ರಾಷ್ಟ್ರೀಯ ಜಾಗೃತಿ ಮೂಡಿಸಲು ಮಹತ್ತರ ಪಾತ್ರ ವಹಿಸಿವೆ.

ಕರ್ನಾಟಕದ ಸ್ವಾತಂತ್ರ್ಯ ಚಳವಳಿ ಹಾಗೂ ಸ್ವದೇಶಿ ಚಳವಳಿಗಳು ತಿಲಕರಿಂದ ದಟ್ಟವಾಗಿ ಪ್ರಭಾವಗೊಂಡಿದ್ದವು. ಉತ್ತರ ಕರ್ನಾಟಕದ ಬಹುಭಾಗಗಳಲ್ಲಿ ಸಂಚರಿಸಿ ತಮ್ಮ ಭಾಷಣಗಳ ಮೂಲಕ ಜನರನ್ನು ಜಾಗೃತಗೊಳಿಸಿದ್ದರು. ಅಲ್ಲದೆ ಅವರ ಪತ್ರಿಕೆಗಳಾದ `ಕೇಸರಿ' ಮತ್ತು `ಮರಾಠ'ಗಳಿಗೆ ನೂರಾರು ಚಂದಾದಾರರೂ ಕರ್ನಾಟಕದಲ್ಲಿದ್ದರು. ತಿಲಕರ `ಸ್ವರಾಜ್ಯ' ಘೋಷಣೆ, ವಿದೇಶಿ ವಸ್ತುಗಳ ಬಹಿಷ್ಕಾರ, ರಾಷ್ಟ್ರೀಯ ಶಿಕ್ಷಣದ ಮಹತ್ವದಂತಹ ಕಾರ್ಯಕ್ರಮಗಳು ಜನತೆಯನ್ನು ಆಕರ್ಷಿಸಿದ್ದವು. ಕರ್ನಾಟಕದ ಧಾರವಾಡ, ಬೆಳಗಾವಿ, ಗದಗ್, ಬಾಗಲಕೋಟೆ ಮುಂತಾದ ಕಡೆಗಳಲ್ಲಿ `ವಂಗಭಂಗ' ಪ್ರತಿಭಟನಾ ಚಳವಳಿಗಳು ನಡೆದವು. ಕರ್ನಾಟಕದ ಹಲವೆಡೆ ರಾಷ್ಟ್ರೀಯ ಶಾಲೆಗಳನ್ನು ತೆರೆಯಲಾಯಿತು.

ಗಾಂಧೀಜಿಯವರ ಆಗಮನದಿಂದಾಗಿ ಭಾರತದ ಸ್ವಾತಂತ್ರ್ಯ ಆಂದೋಲನಕ್ಕೆ ಹೊಸ ಆಯಾಮ ದೊರೆಯಿತು. ಗಾಂಧೀಜಿಯವರು ಅಸಹಕಾರ ಚಳವಳಿಗೆ ಕರೆ ನೀಡಿದಾಗ ಕರ್ನಾಟಕದ ಜನತೆ ಸಕ್ರೀಯವಾಗಿ ಪ್ರತಿಕ್ರಿಯಿಸಿದರು. ಈ ಮೊದಲು ಅಂದರೆ ಕ್ರಿ.ಶ. ೧೯೨೦ರಲ್ಲಿ ಮಾಜಿ ದಿವಾನರಾದ ಸರ್.ವಿ.ಪಿ.ಮಾದವರಾಯರ ಅಧ್ಯಕ್ಷತೆಯಲ್ಲಿ ಧಾರವಾಡದಲ್ಲಿ ನಡೆದ `ಅಖಿಲ ಕರ್ನಾಟಕ ರಾಜಕೀಯ ಪರಿಷತ್'ನಲ್ಲಿ ಠರಾವ್ ಒಂದು ಸ್ವೀಕರಿಸಿದರು. ಇದರಂತೆ ಇದೇ ವರ್ಷ ನಾಗಪುರದಲ್ಲಿ ನಡೆಯುವ ಅಖಿಲ ರಾಷ್ಟ್ರೀಯ ಕಾಂಗ್ರೆಸ್‌ನ ಅಧಿವೇಶನದಲ್ಲಿ ಸುಮಾರು ಒಂದು ಸಾವಿರ ಮಂದಿ ಕರ್ನಾಟಕದ ಪ್ರತಿನಿಧಿಗಳು ಭಾಗವಹಿಸಿ ಪ್ರತ್ಯೇಕ `ಕರ್ನಾಟಕ ಪ್ರದೇಶ ಕಾಂಗ್ರೆಸ್ ಕಮಿಟಿ' ಒತ್ತಾಯಿಸಿ ತಮ್ಮ ಬೇಡಿಕೆಯನ್ನಿತ್ತರು. ಪರಿಣಾಮವಾಗಿ `ಕರ್ನಾಟಕ ಪ್ರದೇಶ ಕಾಂಗ್ರೆಸ್'ನ ರಚನೆಗೆ ಅನುಮೋದನೆ ದೊರೆಯಿತು.

ಕರ್ನಾಟಕ ಸ್ವಾತಂತ್ರ್ಯ ಹೋರಾಟದಲ್ಲಿ ಕ್ರಿ.ಶ. ೧೯೨೪ರಲ್ಲಿ ಬೆಳಗಾವಿಯಲ್ಲಿ ನಡೆದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನ ಒಂದು ಹೊಸ ಮೈಲಿಗಲ್ಲಾಯಿತು. ಇದರ ಅಧ್ಯಕ್ಷತೆಯನ್ನು ಗಾಂಧೀಜಿಯವರೇ ವಹಿಸಿದ್ದು ಒಂದು ವೈಶಿಷ್ಟ್ಯ ಹಾಗೂ ಅನೇಕ ಕಾಂಗ್ರೆಸ್‌ನ ದಿಗ್ಗಜರು ಇದರಲ್ಲಿ ಭಾಗವಹಿಸಿದ್ದರು. ಇವರು ಮಾಡಿದ ಭಾಷಣಗಳು ಕನ್ನಡಿಗರ ಮೇಲೆ ಮಹತ್ತರ ಪ್ರಭಾವ ಬೀರಿದವು. ಕ್ರಿ.ಶ. ೧೯೩೦ ರಲ್ಲಿ ಗಾಂಧೀಜಿ ಪ್ರಕಟಿಸಿದ ಕಾನೂನು ಭಂಗ ಚಳವಳಿಯಲ್ಲಿ ಕರ್ನಾಟಕವು ಕೂಡ ತನ್ನ ಅಸಾಧಾರಣ ಜಾಗೃತಿಯನ್ನು ತೋರಿಸಿತು. ಗಾಂಧೀಜಿಯವರನ್ನು ದಂಡಿಯಲ್ಲಿ ಉಪ್ಪಿನ ಸತ್ಯಾಗ್ರಹ ಕೈಗೊಂಡು ದೇಶದಾದ್ಯಂತ ಜನತಾ ಆಂದೋಲನಕ್ಕೆ ನಾಂದಿ ಹಾಡಿದರು. ದಂಡಿ ಸತ್ಯಾಗ್ರಹದಲ್ಲಿ ಕರ್ನಾಟಕದ ಮೈಲಾರ ಮಹದೇವಪ್ಪನವರು ಪಾಲ್ಗೊಂಡಿದ್ದು ವಿಶೇಷ. ಕರ್ನಾಟಕದಲ್ಲಿ ಕೆ.ಪಿ.ಸಿ.ಸಿ.ಯ ಆಶ್ರಯದಲ್ಲಿ ಅಂಕೋಲದಲ್ಲಿ ಸಾವಿರಾರು ಜನ ಸೇರಿ ಉಪ್ಪಿನ ಸತ್ಯಾಗ್ರಹವನ್ನು ನಡೆಸಿ ಯಶಸ್ವಿಯಾದರು. ಆದರೆ ಎಂ.ಪಿ.ನಾಡ್‌ಕರ್ಣಿ ಮುಂತಾದ ನಾಯಕರು ಬಂಧನಕ್ಕೊಳಗಾದರು. ಅಂಕೋಲದಲ್ಲಿ ಈ ಸತ್ಯಾಗ್ರಹವನ್ನು ೪೫ ದಿನಗಳ ಕಾಲ ನಡೆಸಲಾಯಿತು. ಆದ್ದರಿಂದಲೇ

ಅಂಕೋಲಕ್ಕೆ ಎರಡನೆಯ ಬಾರ್ಡೋಲಿ ಎಂಬ ಹೆಸರು ಬಂದಿತು. ಅಂಕೋಲ ಮಾತ್ರವಲ್ಲದೆ ಕರ್ನಾಟಕದ ಇತರ ಮೂವತ್ತೆರಡು ಕೇಂದ್ರಗಳಲ್ಲಿ ಅಂದರೆ ಹೆಚ್ಚಾಗಿ ದಕ್ಷಿಣ ಕನ್ನಡ ಜಿಲ್ಲೆಯ ಮಂಗಳೂರು, ಉಡುಪಿ, ಕುಂದಾಪುರ, ಪುತ್ತೂರು, ಮಲ್ಪೆ, ಮಂಜೇಶ್ವರ ಮುಂತಾದ ಕಡೆ ಉಪ್ಪನ್ನು ತಯಾರಿಸಲಾಯಿತು.

ಉಪ್ಪಿನ ಸತ್ಯಾಗ್ರಹದ ನಂತರವೇ ಅರಣ್ಯ ಕಾನೂನುಗಳನ್ನು ಮುರಿದು ಸರ್ಕಾರಿ ಅರಣ್ಯಗಳಲ್ಲಿ ಈಚಲು ಮರಗಳನ್ನು ಕಡಿಯುವುದು, ಹೆಂಡದ ಅಂಗಡಿಗಳ ಮುಂದೆ ಪಿಕೆಟಿಂಗ್ ಮಾಡುವುದು, ಹೆಂಡದ ಹರಾಜಿಗೆ ಅಡ್ಡಿಪಡಿಸುವುದರ ಮೂಲಕ ಪಾನ ನಿರೋದ ಸತ್ಯಾಗ್ರಹವನ್ನು ಮಾಡಿ ಪೊಲೀಸರಿಂದ ಲಾಠಿ ಏಟುಗಳನ್ನು ತಿಂದು ಚಳವಳಿ ಮುಂದುವರಿಸಿದರು. ಈ ಚಳವಳಿಯಲ್ಲಿ ಮಹಿಳೆಯರು ಹೆಚ್ಚಾಗಿ ಪಾಲ್ಗೊಂಡಿದ್ದರು.

ಸಿರಸಿ, ಸಿದ್ದಾಪುರ ಮತ್ತು ಅಂಕೋಲಾ ತಾಲೂಕುಗಳಲ್ಲಿ ರೈತರು ಕಂದಾಯವನ್ನು ನೀಡದೆ ಕರ ನಿರಾಕರಣಾ ಚಳವಳಿ ನಡೆಸಿದರು. ಇದರಿಂದ ಈ ಒಂದು ವರ್ಷದ ಅವಧಿಯಲ್ಲಿ ಸಾವಿರಾರು ಸ್ತ್ರೀ ಪುರುಷರು ಶಿಕ್ಷೆಗೆ ಒಳಗಾದರು. ಕಂದಾಯ ಕೊಡದವರ ಮನೆಗಳನ್ನು ಜಪ್ತಿ ಮಾಡಿ ಬೀಗ ಮುದ್ರೆ ಹಾಕಿ ವಾಸಕ್ಕೂ ನೆಲೆ ಇಲ್ಲದಂತೆ ಮಾಡಿದರು. ಕೇವಲ ಬ್ರಿಟಿಷರ ನೇರ ಆಳ್ವಿಕೆಗೆ ಒಳಪಟ್ಟ ಪ್ರದೇಶಗಳಲ್ಲಿ ಮಾತ್ರವಲ್ಲದೆ ಸಂಸ್ಥಾನ ಪ್ರದೇಶಗಳಲ್ಲೂ ಜವಾಬ್ದಾರಿ ಸರ್ಕಾರದ ಬೇಡಿಕೆ ಬಲವಾಯಿತು. ಕ್ರಿ.ಶ. ೧೯೩೭ ರ ಅಕ್ಟೋಬರ್‌ನಲ್ಲಿ ಜವಾಬ್ದಾರಿ ಸರ್ಕಾರಕ್ಕಾಗಿ ಚಳವಳಿ ನಡೆಸಲು ಮೈಸೂರು ಕಾಂಗ್ರೆಸ್ ಅಸ್ತಿತ್ವಕ್ಕೆ ಬಂದರೆ, ಕ್ರಿ.ಶ. ೧೯೩೮ ರಲ್ಲಿ ಹೈದರಾಬಾದ್ ಸಂಸ್ಥಾನಿಗೆ ಕಾಂಗ್ರೆಸ್ ಸ್ಥಾಪಿತವಾಯಿತು.

ಕರ್ನಾಟಕ ಸ್ವಾತಂತ್ರ್ಯ ಚಳವಳಿಯ ಇತಿಹಾಸದಲ್ಲಿ ಕ್ರಿ.ಶ. ೧೯೩೮ ರಲ್ಲಿ ಜರುಗಿದ ಎರಡು ಮುಖ್ಯ ಘಟನೆಗಳು ಮಹತ್ವಪೂರ್ಣ ಪಾತ್ರ ವಹಿಸಿವೆ. ಮೈಸೂರು ಕಾಂಗ್ರೆಸಿನ ಮೊಟ್ಟಮೊದಲ ಬಹಿರಂಗ ಅಧಿವೇಶನ ಮದ್ದೂರು ಬಳಿಯ ಶಿವಪುರದಲ್ಲಿ ಕ್ರಿ.ಶ. ೧೯೩೮ರ ಏಪ್ರಿಲ್‌ನಲ್ಲಿ ಟಿ.ಸಿದ್ಧಲಿಂಗಯ್ಯನವರ ಅಧ್ಯಕ್ಷತೆಯಲ್ಲಿ ನಡೆಯಿತು. ಇದು ಬಾರಿ ಬಹಿರಂಗ ಸಭೆಯಾಗಿತ್ತು. ರಾಜ್ಯ ಸರ್ಕಾರ ಸಭೆ ಸೇರದಂತೆ ಪ್ರತಿಬಂಧಕಾಜ್ಞೆಯನ್ನು ಹೊರಡಿಸಿದ್ದರು. ಜನತೆ ಅದನ್ನು ಲೆಕ್ಕಿಸದೆ ಉತ್ಸುಕರಾಗಿದ್ದರು. ಸರ್ಕಾರ ಈ ಸಭೆಯ ಕಾರ್ಯಕ್ರಮಗಳನ್ನು ಹತ್ತಿಕ್ಕಲು ಸರ್ವ ಪ್ರಯತ್ನ ಮಾಡಿ ಟಿ.ಸಿದ್ದಲಿಂಗಯ್ಯ, ಎಚ್.ಸಿ.ದಾಸಪ್ಪ ಮುಂತಾದ ನಾಯಕರನ್ನು ಬಂಧಿಸಿತು. ನಾಯಕರುಗಳ ಬಂಧನವಾದರೂ ಧ್ವಜಾರೋಹಣ ಮತ್ತು ಧ್ವಜ ವಂದನಾ ಕಾರ್ಯಗಳನ್ನು ನಡೆಸಲಾಯಿತು. ಇದೇ ವರ್ಷ ಕೋಲಾರ ಜಿಲ್ಲೆಯ ಗೌರೀಬಿದನೂರು ತಾಲೂಕು ವಿದುರಾಶ್ವತ್ಥದಲ್ಲಿ ನಡೆಯುತ್ತಿದ್ದ ಜಾತ್ರೆಯ ಸಂದರ್ಭದಲ್ಲಿ ಕಾಂಗ್ರೆಸ್ಸಿಗರು ತಮ್ಮ ಪ್ರಚಾರ ಕಾರ್ಯಕ್ಕಾಗಿ ಸಭೆ ನಡೆಸಲು ನಿರ್ಧರಿಸಿದ್ದರು. ಆದರೆ ಸರ್ಕಾರ ಇದನ್ನು ಬಹಿಷ್ಕರಿಸಿತು. ಈ ಬಹಿಷ್ಕಾರವನ್ನು ಉಲ್ಲಂಘಿಸಿ ಕಾಂಗ್ರೆಸ್ ಕಾರ್ಯಕರ್ತರು ತ್ರಿವರ್ಣ ಧ್ವಜವನ್ನು ಹಾರಿಸಿ ಕಾರ್ಯಕ್ರಮ ಪ್ರಾರಂಭಿಸಿದರು. ಇವರನ್ನು ಶಿಕ್ಷಿಸುವ ನೆಪದಲ್ಲಿ ಪೊಲೀಸರು ಗುಂಡು ಹಾರಿಸಿದಾಗ ಅಮಾಯಕರು ಬಲಿಪಶುಗಳಾದರು. ಇಲ್ಲಿ ನಡೆದ ಗೋಲಿಬಾರ್‌ನಲ್ಲಿ ಸುಮಾರು ೩೫ ಜನರು ಮರಣ ಹೊಂದಿದರು. ಈ ದುರಂತ ಘಟನೆಯಿಂದ ಜನಸಾಮಾನ್ಯರು ರೊಚ್ಚಿಗೆದ್ದರು.

೧೯೪೨ರ ಆಗಸ್ಟ್ ೮ ರಂದು ಗಾಂಧೀಜಿಯವರು `ಕ್ವಿಟ್ ಇಂಡಿಯಾ' ಚಳವಳಿಗೆ ಕರೆಯನ್ನಿತ್ತು `ಮಾಡು ಇಲ್ಲವೆ ಮಡಿ' ಎಂಬ ಘೋಷಣೆಯನ್ನು ನೀಡಿದರು. ಇದಕ್ಕೆ ಕರ್ನಾಟಕವು ಜಾಗೃತಗೊಂಡಿತು. ಶಿವಮೊಗ್ಗ ಜಿಲ್ಲೆಯ ಈಸೂರು ಗ್ರಾಮದಲ್ಲಿ ನಡೆದ

ಹೋರಾಟವು ೧೯೪೨ರ ಚಳವಳಿಯಲ್ಲಿ ಇಡೀ ರಾಷ್ಟ್ರದಲ್ಲೇ ಅತ್ಯಂತ ಮಹತ್ವ ಘಟನೆಯಾಗಿದೆ. ಇಲ್ಲಿಯ ವಿದ್ಯಾರ್ಥಿಗಳು ಮತ್ತು ಗ್ರಾಮಸ್ಥರು ಗ್ರಾಮದ ಪ್ರವೇಶ ದ್ವಾರದಲ್ಲಿ `ಸ್ವತಂತ್ರ ಹಳ್ಳಿ' ಎಂಬ ನಾಮಫಲಕ ತೂಗಿಹಾಕಿ ಬೇಜವಾಬ್ದಾರಿ ಸರ್ಕಾರಿ ಅಧಿಕಾರಿಗಳು ಗ್ರಾಮವನ್ನು ಪ್ರವೇಶಿಸಬಾರದು. ಒಂದು ವೇಳೆ ಪ್ರವೇಶಿಸಿದರೆ ತಕ್ಕ ಶಿಕ್ಷೆಯನ್ನು ಅನುಭವಿಸಬೇಕಾಗುತ್ತದೆ ಎಂದು ಸೂಚಿಸಲಾಗಿತ್ತು. ಅಲ್ಲದೆ ಗ್ರಾಮಸ್ಥರು ತಮ್ಮದೇ ಆದ ಪ್ರತಿ ಸರ್ಕಾರವನ್ನು ರಚಿಸಿಕೊಂಡು ಹತ್ತು ವರ್ಷದ ಮಲ್ಲಪ್ಪ ಸರ್ವಾಧಿಕಾರಿಯಾಗಿ ನಿಯಮ ಬದ್ಧರಾಗಿ ಕಾರ್ಯ ನಿರ್ವಹಿಸ ತೊಡಗಿದರು. ವಿಚಾರ ತಿಳಿದ ಅಮಲ್ದಾರರು ಹಾಗೂ ಪೊಲೀಸರು ಗ್ರಾಮಕ್ಕೆ ಧಾವಿಸಿದಾಗ ಗ್ರಾಮಸ್ಥರು ಪ್ರತಿಭಟನೆ ಒಡ್ಡಿದಾಗ ಸಹಿಸದ ಅಧಿಕಾರಿಗಳು ನಿರಾಯುಧರಾದ ಜನರ ಮೇಲೆ ಲಾಠಿ ಪ್ರಹಾರ ಆರಂಭಿಸಿದರು. ಪರಿಸ್ಥಿತಿ ತೀವ್ರಗೊಂಡು ಅಮಲ್ದಾರ ಚನ್ನಕೃಷ್ಣಪ್ಪ ಮತ್ತು ಪೊಲೀಸ್ ಅಧಿಕಾರಿ ಕೆಂಚೇಗೌಡ ಸ್ಥಳದಲ್ಲೇ ಅಸುನೀಗಿದರು. ವಿಷಯ ತಿಳಿದ ಶಿವಮೊಗ್ಗದ ಡೆಪ್ಯೂಟಿ ಕಮೀಷನರ್ ಹೆಚ್ಚಿನ ಪಡೆಯೊಂದಿಗೆ ಬಂದು ಗ್ರಾಮಸ್ಥರ ಮೇಲೆ ಮನಬಂದಂತೆ ಕ್ರೂರವಾಗಿ ವರ್ತಿಸಿ ಶಿಕ್ಷಿಸಿದರು. ಮನೆಗಳಿಗೆ ಬೆಂಕಿ ಹಚ್ಚಿದ್ದಲ್ಲದೆ ಗ್ರಾಮದ ನಲವತ್ತೊಂದು ಜನರನ್ನು ವಿಚಾರಣೆಗೆ ಒಳಪಡಿಸಿ ನಾನಾ ಬಗೆಯ ಶಿಕ್ಷೆಗೆ ಗುರಿಪಡಿಸಲಾಯಿತು. ಆನಂತರದಲ್ಲಿ ಚಳವಳಿ ಉಗ್ರ ಸ್ವರೂಪ ಪಡೆಯಿತು. ವಿದ್ಯಾರ್ಥಿಗಳು ಶಾಲಾ ಕಾಲೇಜುಗಳಿಂದ ಹೊರಬಂದರು, ಅಧಿಕಾರಿಗಳು ತಮ್ಮ ವೃತ್ತಿಯನ್ನು ತೊರೆದರು. ಸರ್ಕಾರಿ ಕಛೇರಿಗಳು, ರೈಲ್ವೆ ನಿಲ್ದಾಣಗಳು ಚಳವಳಿಗಾರರ ಆಕ್ರೋಶಕ್ಕೆ ಗುರಿಯಾಗಿ ನಾಶವಾದವು. ಪೊಲೀಸರ ಗೋಲಿಬಾರಿಗೆ ಸಿಕ್ಕಿ ಅನೇಕ ಜನ ಮೃತರಾದರೆ, ಏಳು ಸಾವಿರಕ್ಕೂ ಹೆಚ್ಚಿನ ಜನ ಸೆರೆಮನೆ ಸೇರಿದರು.

ಕ್ರಿ.ಶ.೧೯೪೭ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದರೂ ಕರ್ನಾಟಕ ಜನತೆಯ ಹೋರಾಟ ನಿಲ್ಲಲಿಲ್ಲ. ಕಾರಣ ಮೈಸೂರು ಸಂಸ್ಥಾನ ಸ್ವತಂತ್ರ ಭಾರತದಲ್ಲಿ ವಿಲೀನಗೊಳ್ಳಲಿಲ್ಲ. ಇದರಿಂದ ಮೈಸೂರು ಚಲೋ ಚಳವಳಿಯನ್ನು ಹಮ್ಮಿಕೊಂಡು ಕೆ.ಸಿ.ರೆಡ್ಡಿಯವರ ನಾಯಕತ್ವದಲ್ಲಿ ೧೯೪೭ರ ಸೆಪ್ಟಂಬರ್ ೧೪ ರಂದು ಅರಮನೆಯ ಮುಂದೆ ಸತ್ಯಾಗ್ರಹ ಪ್ರಾರಂಭಿಸಿದರು. ಸಂಸ್ಥಾನದ ಆರ್ಕಾಟ್ ರಾಮಸ್ವಾಮಿ ಮೊದಲಿಯಾರ್ ಮತ್ತು ದಿವಾನರ ಕೌನ್ಸಿಲ್ ಸದಸ್ಯರಾಗಿದ್ದ ತಂಬುಚೆಟ್ಟಿಯ ವಿರುದ್ಧ ಘೋಷಣೆಗಳನ್ನು ಕೂಗಿದರು. ಹೋರಾಟ ತೀವ್ರಗೊಂಡಾಗ ಮಹಾರಾಜರು ವಿಧಿ ಇಲ್ಲದೆ ಭಾರತ ಸರ್ಕಾರದಲ್ಲಿ ವಿಲೀನಗೊಳ್ಳಲು ಒಪ್ಪಿದರು. ಕೊನೆಗೆ ಕರ್ನಾಟಕದಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪನೆಯಾಯಿತು.

# ಅಧ್ಯಾಯ - ೪

# ನವೋದಯ ಕಾವ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆ

ಭಾರತೀಯ ಸಾಹಿತ್ಯದಲ್ಲಿ ಕಂಡು ಬಂದ ಈ ನವೋದಯ ಒಂದು ದೃಷ್ಟಿಯಲ್ಲಿ ವಿಶಿಷ್ಟವಾದದ್ದು. ಇತರ ದೇಶಗಳ ಸಾಹಿತ್ಯದಲ್ಲಿ ನವೋದಯ ಉಂಟಾದರೆ ದಾಸ್ಯದಲ್ಲಿರುವ ರಾಷ್ಟ್ರಗಳಲ್ಲಿ ಹೀಗಾದದ್ದು ಕಡಿಮೆ. ದಾಸ್ಯದಿಂದ ಮುಕ್ತಿ ಬಯಸಿದ ರಾಷ್ಟ್ರವು ಸ್ವಾತಂತ್ರ್ಯವನ್ನು ಪಡೆಯುವ ಬಯಕೆಯಿಂದ ಸಾಹಿತ್ಯವನ್ನು ಮಾಧ್ಯಮವಾಗಿ ಬಳಸಿಕೊಂಡಿದೆ. ಈ ಸಂದರ್ಭದಲ್ಲಿ ಕನ್ನಡ ಕಾವ್ಯದಲ್ಲಿ ನವೋದಯ ಹೇಗೆ ಉಂಟಾಗಿದೆ ಹಾಗೂ ಸ್ವಾತಂತ್ರ್ಯದ ಹಂಬಲ ಹೇಗೆ ವ್ಯಕ್ತವಾಗಿದೆ ಎಂಬ ಎರಡೂ ಅಂಶಗಳನ್ನು ತಿಳಿಯಬಹುದು. ನವೋದಯ ಕಾಲದಲ್ಲಿ ಕಂಡು ಬಂದ ಕಾವ್ಯ ರೂಪಗಳು, ಪ್ರಕಾರಗಳು, ಛಂದೋ ವೈವಿಧ್ಯಗಳು ಮತ್ತು ಭಾರತದ ಸ್ವಾತಂತ್ರ್ಯವನ್ನು ಕುರಿತಾದ ಒಲವು ನಿಲುವುಗಳನ್ನು ಅಧ್ಯಯನ ಮಾಡಲಾಗುತ್ತದೆ.

ಇಲ್ಲಿಯವರೆಗೆ ಕನ್ನಡ ಕಾವ್ಯ ರಚನೆ ಚಂಪು, ರಗಳೆ, ಷಟ್ಪದಿ ಇತ್ಯಾದಿ ಪ್ರಾಚೀನ ಪ್ರಕಾರಗಳಲ್ಲೆ ನಡೆಯುತ್ತಿತ್ತು. ಇಂಗ್ಲಿಷ್ ಕಾವ್ಯ ಪ್ರಭಾವದಿಂದಾಗಿ ಕನ್ನಡದಲ್ಲಿ ಹೊಸ ಕಾವ್ಯ ಪ್ರಕಾರಗಳು ಪ್ರವೇಶಿಸಿದವು. ಈ ಹೊಸ ಅಲೆಗೆ ಗೋವಿಂದ ಪೈ, ಕುವೆಂಪು, ಬೇಂದ್ರ, ಕಡಂಗೋಡ್ಲು ಶಂಕರಭಟ್ಟರು ಮೊದಲಾದವರು ತಮ್ಮ ಅನುಭವಗಳನ್ನು ತೆರೆದುಕೊಂಡು ಕಾವ್ಯ ರಚನೆ ಮಾಡಿದರು. ಭಾವಗೀತ ಪ್ರಕಾರಗಳಾದ ಸುನೀತ, ಕಥನ ಕವನ, ಶೋಕ ಗೀತೆ, ಪ್ರಗಾಥ ಹಾಗೂ ಮಹಾಕಾವ್ಯ ಮುಂತಾದ ಕಾವ್ಯ ಪ್ರಕಾರಗಳನ್ನು ಪಾಶ್ಚಾತ್ಯ ಕಾವ್ಯ ಪ್ರಭಾವ ಪ್ರೇರಣೆಗಳಿಂದ ಕನ್ನಡದಲ್ಲಿ ಸ್ವತಂತ್ರವಾಗಿ ರಚಿಸಲು ಪ್ರಾರಂಭಿಸಿದರು. ಹಾಗೆಯೇ ಸರಳರಗಳೆ, ಮಹಾ ಛಂದಸ್ಸು, ಪ್ರಸತ್ಯಾಗವನ್ನು ಕಾವ್ಯದಲ್ಲಿ ಬಳಸತೊಡಗಿದರು.

ಭಾವನೆಗಳ ಅಭಿವ್ಯಕ್ತಿಗೆ ತಕ್ಕ ಪದ ವಿನ್ಯಾಸಗಳಿಂದ ಕೂಡಿದ ಹಾಗೂ ಗೀತ ಮಾಧುರ್ಯದಿಂದ ವ್ಯಕ್ತಗೊಳ್ಳುವ ಕವಿತೆಗೆ ಭಾವಗೀತೆ ಎಂದು ಕರೆಯಲಾಗುತ್ತದೆ. ಕಾವ್ಯ ಪ್ರಕಾರಗಳಲ್ಲಿ ಒಂದಾಗಿರುವ ಇದು ಮುಖ್ಯವಾಗಿ ಸಂಗೀತದ ಸಹಚರ್ಯವುಳ್ಳ ಕವಿತೆಯಾಗಿದೆ. ಇದರ ಮೂಲವನ್ನು ತಿಳಿಯುವುದಾದರೆ ಗ್ರೀಕರು ತಮ್ಮ ದೇವತೆಗಳನ್ನು ಮತ್ತು ಐತಿಹಾಸಿಕ ವೀರರನ್ನು ಗುಣಗಾನ ಮಾಡುವಾಗ ಬಳಸುತ್ತಿದ್ದರು. ``ಪ್ರಾಚೀನ ಗ್ರೀಕರು ಲೈರ್ ಎಂಬ ತಂತಿ ವಾದ್ಯವನ್ನು ನುಡಿಸುತ್ತಾ ಹಾಡುತ್ತಿದ್ದ ಹಾಡುಗಳನ್ನು ಅನುಸರಿಸಿ ಇಂಗ್ಲಿಷ್‌ನಲ್ಲಿ ಲಿರಿಕ್‌ನ್ನು ತರಲಾಯಿತು. ಇಂಗ್ಲಿಷಿನ ಈ ಲಿರಿಕ್‌ನ್ನು ಮಾದರಿಯಾಗಿಟ್ಟುಕೊಂಡು ಕನ್ನಡದಲ್ಲಿ ಭಾವಗೀತೆ ಎಂಬ ಪ್ರಕಾರವು ಬೆಳಕಿಗೆ ಬಂದಿತು``[1]. ಗ್ರೀಕ್ ಸಂಸ್ಕೃತಿ ಮತ್ತು ಸಾಹಿತ್ಯದಲ್ಲಿ ಕಂಡು ಬಂದ ಈ ಬಗೆಯ ಗೀತೆಗಳಿಂದ ಸ್ಫೂರ್ತಿಯನ್ನು ಪಡೆದು ಇಂಗ್ಲಿಷ್ ಕವಿಗಳು ಲಿರಿಕ್ ಎಂಬ ಹೊಸ ಬಗೆಯ ಕಾವ್ಯ ಪ್ರಕಾರವನ್ನು ಕಂಡುಕೊಂಡು ಕವಿತೆಗಳನ್ನು ರಚಿಸತೊಡಗಿದರು. ಇವರು ತಮ್ಮ ಸುತ್ತಲಿನ ಸಮಕಾಲಿನ ಜಗತ್ತಿನಲ್ಲಿ ಕಂಡ ದೃಶ್ಯ ಮತ್ತು ಘಟನೆಗಳನ್ನೆಲ್ಲವನ್ನು ಅತ್ಯಂತ ಹೃದಯಂಗಮವಾಗಿ ಲಿರಿಕ್‌ಗಳಲ್ಲಿ ಸೃಷ್ಟಿಸಿದರು. ಇಂಗ್ಲಿಷ್ ಭಾಷೆ ಮತ್ತು ಸಾಹಿತ್ಯವನ್ನು ಅಧ್ಯಯನ ಮಾಡತೊಡಗಿದ ಕನ್ನಡ ಕವಿಗಳು ಇದೇ ಬಗೆಯ ಕವನಗಳನ್ನು ಕನ್ನಡದಲ್ಲಿಯೂ ರಚಿಸಲು ಉತ್ಸುಕರಾದರು. ಬಿಎಂಶ್ರೀಯವರ `ಇಂಗ್ಲಿಷ್ ಗೀತಗಳು` ಎಂಬ ಕವನ ಸಂಕಲನವು ಇಂಗ್ಲಿಷ್ ಕವಿಗಳು ರಚಿಸಿದ ಭಾವಗೀತೆಗಳ ಅನುವಾದದ ಕೃತಿಯಾಗಿದೆ. ಇಲ್ಲಿಂದ ಪ್ರಾರಂಭವಾದ ಭಾವಗೀತೆಗಳು ಅನುವಾದದ ರೂಪದಲ್ಲಿ, ನಂತರ ಸ್ವತಂತ್ರ ರಚನೆಗಳ ರೀತಿಯಲ್ಲಿ ಕಂಡು ಬಂದು ನವೋದಯ ಕಾವ್ಯದಲ್ಲಿ ಒಂದು ಪ್ರಮುಖ ಸ್ಥಾನವನ್ನು ಪಡೆದವು.

ಭಾವಗೀತೆಯ ಉಪ ಪ್ರಕಾರಗಳೆಂದು ಹೇಳಲಾಗುವ ಸುನೀತ, ಪ್ರಗಾಥ, ಶೋಕಗೀತೆ ಮತ್ತು ಕಥನಾ ಕವನಗಳು ನವೋದಯ ಕಾಲದಲ್ಲಿಯೇ ಕನ್ನಡದಲ್ಲಿ ಕಂಡು ಬಂದವು.

``ಸುನೀತ ಎಂದು ಕರೆಯಲಾಗುವ ಇಂಗ್ಲೀಷ್‌ನ `ಸಾನೆಟ್`ನ್ನು ಕನ್ನಡದಲ್ಲಿ ಮೊತ್ತಮೊದಲಿಗೆ ತಂದವರು ಗೋವಿಂದ ಪೈ. ಅವರು ಅದನ್ನು ಚತುರ್ದಶಪದಿ ಎಂದು ಕರೆದಿದ್ದಾರೆ. ಬೇಂದ್ರೆಯವರು, ಮಾಸ್ತಿಯವರು ಇದಕ್ಕೆ ಅಷ್ಟ ಷಟ್ಪದಿ ಎಂಬ ಹೆಸರನ್ನು ಕೊಡುತ್ತಾರೆ. `ಸಾನೆಟ್` ಎನ್ನುವುದು ಹದಿನಾಲ್ಕು ಸಾಲುಗಳ ರಚನೆ``.[2] ಗೋವಿಂದ ಪೈಯವರ `ಎಲ್ಲಿಂದ ಕಾಲಗ್ರೀಷ್ಮಮಿದೆನ್ನ ಮನದಿ`,` ಜಯ ಹಿಂದ ಗೀತೆ`, `ಸವಧರ್ಮವ ನೀಗಿ` , `ಮರೆಯ ಸೇರೆನ್ನ` , `ರಾಹುವನು ತೋಗಿಸಿದೊ ಕೇತುವನು ತಂದೆ, `ಎಲ್ಲೆಲ್ಲಿ ನಿನ್ನರಸಿದೆ ಕಂಡೆನಿಲ್ಲ` ಮುಂತಾದ ಕವನಗಳನ್ನು ಸಾನೆಟ್‌ನಲ್ಲಿ ರಚಿಸಿದ್ದಾರೆ. ಕುವೆಂಪು ಅವರ `ಸ್ವಾತಂತ್ರ್ಯ`, ಬೇಂದ್ರೆಯವರ `ಗುಮ್ಮ`, ವಿ.ಕೃ.ಗೋಕಾಕ್‌ರವರ `ಅಬ್ಯುದಯ`, ಪುತಿನ ಅವರ `ಮಳೆ` ಮುಂತಾದ ಕವಿತೆಗಳು ಸಾನೆಟ್‌ನಲ್ಲಿರುವುದನ್ನು ಗುರುತಿಸಬಹುದು.

ಭಾವಗೀತೆಯ ಮತ್ತೊಂದು ಪ್ರಕಾರ `ಪ್ರಗಾಥ` ಇಂಗ್ಲಿಷ್‌ನ ಓಡ್ ಎಂಬ ಪದವನ್ನು ಬಿಎಂಶ್ರೀ ಯವರು ಪ್ರಗಾಥ ಎಂದು ಕರೆದರು. ಬಿಎಂಶ್ರೀ ಯವರ `ಶ್ರೀ ಕೃಷ್ಣರಾಜ ಮಹೋತ್ಸವ` ಒಂದು ಪ್ರಮುಖ ಪ್ರಗಾಥವಾಗಿದೆ. ನಂತರ ಕುವೆಂಪುರವರು `ಶ್ರೀ ಸ್ವಾತಂತ್ರೋದಯ ಮಹಾ ಪ್ರಗಾಥ`, ಗೋವಿಂದ ಪೈ `ಗೊಮ್ಮಟ ಜಿನಸ್ತುತಿ`, ಮಾಸ್ತಿಯವರ `ಅರುಣ`, ಬೇಂದ್ರೆಯವರ `ಓ ಹಾಡೆ` ಮುಂತಾದವು ಪ್ರಗಾಥಕ್ಕೆ ಉತ್ತಮ ಉದಾಹರಣೆ ಗಳಾಗಿವೆ.

ಕನ್ನಡದಲ್ಲಿನ ಶೋಕ ಗೀತೆಯು ಇಂಗ್ಲಿಷ್‌ನ `ಎಲಿಜಿ`ಗೆ ಸಮನಾಗಿ ಉಳಿದುಕೊಂಡು ಬಂದಿದೆ. ಕನ್ನಡದಲ್ಲಿ ಒಂದು ಪ್ರತ್ಯೇಕ ಪ್ರಕಾರವಾಗಿ ಶೋಕಗೀತೆ ಸ್ಥಾನವನ್ನು ಪಡೆದುಕೊಂಡಿಲ್ಲವಾದರೂ ಪಂಪ, ರನ್ನ, ಪೊನ್ನ, ನಾಗಚಂದ್ರ ಮುಂತಾದವರ ಕಾವ್ಯಗಳೊಳಗೆ ಶೋಕ ಗೀತೆಗಳನ್ನು ಕಾಣಬಹುದು. ಆಧುನಿಕ ಕನ್ನಡ ಕಾವ್ಯದಲ್ಲಿ ಕಡಂಗೋಡ್ಲು ಶಂಕರಭಟ್ಟರ `ಮಾದ್ರಿಯ ಚಿತೆ`, ಬೇಂದ್ರೆಯವರ `ನೀ ಹೀಂಗ ನೋಡ ಬ್ಯಾಡ ನನ್ನ`, ಮಾಸ್ತಿಯವರ `ತಂದೆಯರ ಅಕ್ಕ ತೀರಿ ಹೋದ ಸಂಜೆ` ಕವಿತೆಗಳಲ್ಲಿ ಎಲಿಜಿಯನ್ನು ಕಾಣಬಹುದು.

`ಕಥನ ಕವನ' ಎಂಬುದಕ್ಕೆ ಕಥನ ಕವಿತೆ, ಪದ್ಯಕವಿತೆ, ನೀಳ್ಗವಿತೆ, ಕಥನ ಗೀತೆ ಎಂಬಿತ್ಯಾದಿ ಹೆಸರುಗಳಿವೆ. ಕಥೆಯೊಂದನ್ನು ಪದ್ಯದ ಧಾಟಿಯಲ್ಲಿ ಹೇಳುವುದು, ಕಥೆಯೊಂದು ಕಥನ ಧಾಟಿಯಲ್ಲಿ ಪದ್ಯ ರೂಪದಲ್ಲಿ ಕಾವ್ಯಾತ್ಮಕ ಅಭಿವ್ಯಕ್ತಿಯನ್ನು ಪಡೆದರೆ ಅದು ಕಥನ ಕವನ ಎನಿಸಿಕೊಳ್ಳುತ್ತದೆ. ಕಥೆ ಮತ್ತು ಕವನದ ಹದವಾದ ಮಿಶ್ರಣವೇ ಕಥನ ಕವನ. ಈ ಕಾವ್ಯ ಪ್ರಕಾರ ನವೋದಯ ಕಾವ್ಯ ಸಂದರ್ಭದಲ್ಲಿ ಹೆಚ್ಚಾಗಿ ಬಂದದ್ದು. ಸ್ವಯಂ ಪೂರ್ಣವಾದ ಒಂದು ಕತೆಯಿದ್ದು, ಅದನ್ನು ಹಾಡಿನ ರೂಪದಲ್ಲಿ ನಿರೂಪಿಸುವಂತಿದ್ದರೆ ಅದನ್ನು ಕಥನ ಕವನ ಎನ್ನಲಾಗುತ್ತದೆ. ಯಾವುದಾದರೂ ಒಂದು ಕಥೆಯನ್ನಿಟ್ಟುಕೊಂಡು ಕವನವನ್ನು ಕಟ್ಟುವ ಕಾರ್ಯ ಇಲ್ಲಿ ನಡೆಯುತ್ತದೆ. ಈ ಪ್ರಕಾರವನ್ನು ಬಿಎಂ ಶ್ರೀಯವರು ಹೆಚ್ಚಾಗಿ ಬಳಸಿದ್ದಾರೆ. ಅವರ `ಬೆನ್‌ಹಿಮ್`, ಕಾರಿ ಹೆಗ್ಗಡೆಯ ಮಗಳು`, ಮಾಸ್ತಿಯವರ `ಮದಲಿಂಗನ`, ಸೇಡಿಯಾಪು ಕೃಷ್ಣ ಭಟ್ಟರು, ಗೋವಿಂದ ಪೈ, ಸು.ರಂ. ಎಕ್ಕುಂಡಿ, ಕುವೆಂಪು ಮುಂತಾದವರು ಕಥನ ಕವನಗಳನ್ನು ರಚಿಸಿದ್ದಾರೆ.

`ಎಪಿಕ್` ಎಂಬುದಕ್ಕೆ ಸಮನಾರ್ಥಕವಾಗಿ `ಮಹಾಕಾವ್ಯ` ಎಂಬ ಪದವನ್ನು ಬಳಸಲಾಗುತ್ತದೆ. ಏಕ ಘಟನೆಯ ಸುತ್ತ ಕತೆ ಬೆಳೆಯುತ್ತದೆ. ಅನೇಕ ಕತೆಗಳು ಅಲ್ಲಿ ಮಿಳಿತವಾಗಿ ಮಹಾಕಾವ್ಯ ರೂಪವನ್ನು ಪಡೆಯುತ್ತದೆ. ಸಾಮಾನ್ಯವಾಗಿ ಮಹಾಕಾವ್ಯಗಳು ಬದುಕಿನಿಂದಲೇ ವಸ್ತುವನ್ನು ತೆಗೆದುಕೊಂಡು ಛಂದೋಬದ್ಧವಾಗಿ ಪ್ರೌಢಶೈಲಿಯಲ್ಲಿ, ಉದಾತ್ತ ಪಾತ್ರಗಳನ್ನೊಳಗೊಂಡು ಬೃಹತ್ ಗಾತ್ರದಲ್ಲಿ ರಚನೆಗೊಳ್ಳುತ್ತಿದ್ದವು. ಇವು ಹೇಳುವ ಮೌಲ್ಯ ಸಾರ್ವಕಾಲಿಕವಾಗುತ್ತಿದುದ್ದು ಈ ಕೃತಿಗಳ ವಿಶಿಷ್ಟ ಸಂಗತಿಯಾಗಿದೆ. ಆದರೆ ಇದು ಹೊಸಗನ್ನಡದ ಸಂದರ್ಭದಲ್ಲಿ ಬದಲಾವಣೆಯನ್ನು ಹೊಂದಿ ಬೆಳೆದು ಬಂದಿದೆ. ರಾಮಾಯಣ, ಮಹಾಭಾರತ, ಇಲಿಯಡ್, ಒಡಿಸ್ಸಿ ಇವು ಕ್ರಮವಾಗಿ ಭಾರತದ ಮತ್ತು ಯುರೋಪಿನ ರಾಷ್ಟ್ರೀಯ ಮಹಾಕಾವ್ಯಗಳು ಈ ಮಹಾಕಾವ್ಯಗಳ ವಸ್ತುವನ್ನೇ ನವೋದಯ ಕವಿಗಳು ಆಯ್ದುಕೊಂಡು ಹೊಸ ಆಲೋಚನೆ, ಚಿಂತನೆಗಳನ್ನು ಸೇರಿಸಿ ಮಹಾಕಾವ್ಯಗಳನ್ನು ರಚಿಸಿದ್ದಾರೆ. ಕುವೆಂಪು `ಶ್ರೀ ರಾಮಾಯಣ ದರ್ಶನಂ`ನ್ನು ಇಲ್ಲಿ ನೆನೆಯಬಹುದು.

ಪ್ರಾಸ ಎಂಬುದು ಸಂಸ್ಕೃತ ಶಬ್ಧ. ಆದರೂ ಸಂಸ್ಕೃತದಲ್ಲಿ ಆದಿ ಪ್ರಾಸ ನಿಯತವಲ್ಲ. ಕನ್ನಡದಲ್ಲಿ ಆದಿ ಪ್ರಾಸ ಕಡ್ಡಾಯವಾಗಿ ಬಂದೇ ಬರುತ್ತದೆ. ಪ್ರಾಚೀನ ಕನ್ನಡ ಕಾವ್ಯಗಳಲೆಲ್ಲಾ ಪ್ರಾಸವನ್ನು ನಿಯತವಾಗಿ ಕವಿಗಳು ಪಾಲಿಸುತ್ತಾ ಬಂದಿದ್ದಾರೆ. ಪದ್ಯದ ಕವಿತಾ ಶಕ್ತಿ ಅತಿಯಾಗಿ ಹರಿಯದಂತೆ, ಒಂದು ಬಿಗಿ ತಂದು, ನಾದ ಗುಣವನ್ನು ಹೆಚ್ಚಿಸುವುದರಿಂದ ಕವಿಗೆ ಹೆಚ್ಚಿನ ಮಾನ್ಯತೆ ದೊರೆಯುತ್ತಿತ್ತು. ಪ್ರಾಚೀನ ಕಾಲದಿಂದಲೂ ನಮ್ಮ ಕನ್ನಡ ಕವಿಗಳು ತಮ್ಮ ಕಾವ್ಯಗಳಲ್ಲಿ `ಪ್ರಾಸ`ವನ್ನು ಕಾವ್ಯದ ಒಂದು ಪ್ರಮುಖ ಲಕ್ಷಣವೆಂಬಂತೆ ಬಳಸುತ್ತಿದ್ದರು. ಪ್ರಾಸವನ್ನು ತೊರೆದು ಕಾವ್ಯ ರಚಿಸಲು ಸಾಧ್ಯ ಎಂಬುದನ್ನು ನವೋದಯ ಕವಿಗಳು ತೋರಿಸಿದರು. ನವೋದಯ ಕವಿಯಾದ ಗೋವಿಂದ ಪೈಯವರು ಕೆಲವು ಕವನಗಳಿಗೆ ಪ್ರಾಸವನ್ನು ಬಳಸಿದ್ದರೂ ಪ್ರಾಸ ತ್ಯಾಗದ ನಿರ್ಧಾರವನ್ನು ಕೈಗೊಂಡು, ಕಾವ್ಯ ರಚಿಸಿದವರಲ್ಲಿ ಮೊದಲಿಗರು. ಇವರ `ಹೊಲೆಯನಾರು ?` ಎಂಬ ಕವಿತೆಯಲ್ಲಿ ಮೊದಲ ಪ್ರಯೋಗವನ್ನು ನಡೆಸಿ ಯಶಸ್ವಿಯಾದರು. ಇವರು ದ್ವಿತೀಯ ಪ್ರಾಸವನ್ನು ಬಿಟ್ಟರೇ ಹೊರತು ಅಂತ್ಯ ಪ್ರಾಸವನ್ನಲ್ಲ. ಆದರೂ ಪ್ರಾಸ ಬಳಕೆಯ ನಿಯಮವನ್ನು ಕಡ್ಡಾಯವಾಗಿ ಬಳಸುತ್ತಿದ್ದ ನಿಲುವು ಬದಲಾಯಿತು.

ಹೊಸಗನ್ನಡ ಸಾಹಿತ್ಯದಲ್ಲಿ ಲಲಿತ ಹಾಗೂ ಮಂದಾನಿಲ ರಗಳೆಗಳನ್ನು ವಿಶೇಷವಾದ ರೀತಿಯಲ್ಲಿ ಬಳಸಿಕೊಳ್ಳಲಾಗಿದೆ. ಆದಿ ಪ್ರಾಸ, ಅಂತ್ಯ ಪ್ರಾಸ ರಹಿತವಾದ ರಗಳೆ ಇಂಗ್ಲಿಷ್‌ನ Blank verseಗೆ ಸರಿಸಮವೆನಿಸಿದೆ. ಇದು ಕಥನ ನಿರೂಪಣೆಗೆ ಸೊಗಸಾಗಿ ಒಪ್ಪುತ್ತದೆ. ``ಇಂಗ್ಲಿಷ್‌ನ Blank verseಗೆ ಸಂವಾದಿಯಾಗಿ ಕನ್ನಡದಲ್ಲಿ `ಸರಳರಗಳೆ` ಎಂಬ ಪದವನ್ನು ಬಳಸಲಾಗುತ್ತಿದೆ. ಇದನ್ನು ಪರಿಷ್ಕರಿಸಿ ಮಹಾಛಂದಸ್ಸು ಎಂಬ ಮತ್ತೊಂದು ರೂಪವನ್ನು ಕುವೆಂಪು ಪರಿಚಯಿಸಿದ್ದಾರೆ. ಟಿ.ಎಸ್.ವೆಂಕಣ್ಣಯ್ಯ ಅವರು ಬಿರುಗಾಳಿ ನಾಟಕಕ್ಕೆ ಮುನ್ನುಡಿ ಬರೆಯುತ್ತಾ ಸರಳ ರಗಳೆ``[3] ಎಂದು ಕರೆದರು. ಕುವೆಂಪು ಅವರ ಮಹಾಕಾವ್ಯವಾದ `ಶ್ರೀ ರಾಮಾಯಣ ದರ್ಶನಂ`ನಲ್ಲಿ ಬಳಸಿರುವುದು ಮಹಾಛಂದಸ್ಸೆಂದು ಹೇಳುತ್ತಾರೆ. ಕುವೆಂಪು ರವರು ೧೯೨೮ ರಲ್ಲಿ `ಯಮನ ಸೋಲು`ವಿನಲ್ಲಿ ಮೊದಲು ಸರಳ ರಗಳೆಯನ್ನು ಬಳಸಿದರು. ನಂತರ ಬಿ.ಎಂ.ಶ್ರೀಯವರ ಅಶ್ವತ್ಥಾಮನ್, ಗೋವಿಂದ ಪೈಯವರ ಗೊಲ್ಗಥಾಗಳು ಸರಳರಗಳೆಯಲ್ಲಿವೆ. ಇದನ್ನು ಮಾಸ್ತಿ, ಕುವೆಂಪು, ಗೋವಿಂದಪೈ, ಪು.ತಿ.ನ., ಕೆ.ಎಸ್.ನ. ಮುಂತಾದವರು ಬಳಸಿದ್ದಾರೆ.

ಹೀಗೆ ನವೋದಯ ಕಾವ್ಯ ರಚನೆಯ ಸಂದರ್ಭದಲ್ಲಿ ಹೊಸ ಕಾವ್ಯ ರೂಪಗಳು, ಛಂದೋ ವೈವಿಧ್ಯಗಳನ್ನು ಬಳಕೆಗೆ ತಂದು

ಅವುಗಳಿಗೆ ನವೋದಯ ಕವಿಗಳು ಕಾವ್ಯವನ್ನು ಮಾಧ್ಯಮವಾಗಿ ಬಳಸಿಕೊಂಡರು. ಈ ಎಲ್ಲ ನವೀನ ಮಾದರಿಗಳನ್ನು ನವೋದಯ ಕವಿಗಳು ಕಾವ್ಯ ರಚನೆಯಲ್ಲಿ ಅನುಸರಿಸಿದ ಸ್ವಾತಂತ್ರ್ಯವಾಗಿದೆ.

ಭಾರತದ ಸ್ವಾತಂತ್ರ್ಯ ಆಂದೋಲನವು ನವೋದಯ ಕವಿಗಳಿಗೆ ಪ್ರಭಾವ ಬೀರಿರುವುದರಲ್ಲಿ ಯಾವುದೇ ಸಂದೇಹವಿಲ್ಲ. ಉತ್ಕಟ ದೇಶಾಭಿಮಾನವುಳ್ಳ ಕವಿಗಳು ಜನತೆಯನ್ನು ಪ್ರೇರೇಪಿಸಲು ಸಮರ್ಥವಾದ ಕೃತಿಗಳನ್ನು ರಚಿಸಲು ಸಾಮರ್ಥ್ಯವನ್ನು ಪಡೆದಿದ್ದರೂ ಅಂದಿನ ಆಳರಸರಿಗೆ ಹೆದರಿ, ಅವರ ಆಕ್ರೋಶವನ್ನು ಮನದಲ್ಲೇ ಹುದುಗಿಸಿಕೊಂಡರು. ವಸಾಹತುಶಾಹಿ ರಾಷ್ಟ್ರಗಳಲ್ಲಿ ರಚಿತವಾಗುವ ಕೃತಿಗಳಲ್ಲಿ ದೇಶಾಭಿಮಾನ ಪೂರಿತವಾದ ಅಂಶಗಳು ಕಡಿಮೆಯಾಗಿರುತ್ತಿತ್ತು. ದಾಸ್ಯವನ್ನು ಧಿಕ್ಕರಿಸುವ ಸ್ವಾತಂತ್ರ್ಯದ ಹಂಬಲವನ್ನು ವ್ಯಕ್ತಪಡಿಸುವ, ರಾಷ್ಟ್ರೀಯ ಪ್ರಜ್ಞೆಯನ್ನು ಬೆಳೆಸುವಂತಹ ಪ್ರಬಲ ಕೃತಿಯನ್ನು ರಚಿಸಿದರೆ ಸರ್ಕಾರದ ಆಗ್ರಹಕ್ಕೆ ಒಳಗಾಗುತ್ತಿದ್ದವು. ಅಂತಹ ``ವಿರುದ್ಧ ಪರಿಸ್ಥಿತಿಯ ಎದುರು ತಲೆ ಎತ್ತಿ ನಿಂತ ಕವಿಗಳು ವಿರಳ. `ನರಬಲಿ', `ತುತ್ತಿನ ಚೀಲ', ರುದ್ರವೀಣೆ' ಮುಂತಾದ ಕ್ರಾಂತಿಕಾರಕ ಕವನಗಳನ್ನು ರಚಿಸಿದ ಬೇಂದ್ರೆ ಸೆರೆಮನೆ ವಾಸ ಅನುಭವಿಸಬೇಕಾಯಿತು. ಹಾಗಾಗಿ ಸ್ವಾತಂತ್ರಕ್ಕೆ ಸಂಬಂಧಿಸಿದಂತೆ ಪರಿಣಾಮಕಾರಿಯಾದ ತಮ್ಮ ರಚನೆಗೆ ಕವಿಗಳು ಹಿಂಜರಿದರು``[4] ಆದರೂ ಅಲ್ಲಲ್ಲಿ ಸ್ವಾತಂತ್ರ್ಯ ಹೋರಾಟಕ್ಕೆ ಅಗತ್ಯವಾದ ವಾತಾವರಣವನ್ನು ಸೃಷ್ಟಿ ಮಾಡುವಂತಹ ಕಾವ್ಯವು ಬಂದಿದೆ.

ಭಾರತದ ಸ್ವಾತಂತ್ರ್ಯ ಆಂದೋಲನದಲ್ಲಿ ಹೋರಾಟಗಾರರ ಮುಖಂಡತ್ವದಲ್ಲಿ ಭಾರತೀಯರಾದ ನಾವೆಲ್ಲರೂ ಒಂದೇ ಎಂಬ ಮನೋಭಾವದಿಂದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿ, ಪರಕೀಯರಿಂದ ದೇಶವನ್ನು ಮುಕ್ತಗೊಳಿಸುವುದರ ಮೂಲಕ ರಾಜಕೀಯ ಪರಿವರ್ತನೆಯನ್ನುಂಟು ಮಾಡಿ, ಸಮಾಜದಲ್ಲಿನ ಶ್ರೀಸಾಮಾನ್ಯನಿಗೆ ಸಾಮಾಜಿಕ ನ್ಯಾಯ ಒದಗಿಸುವ ಮೂಲಕ ರಾಷ್ಟ್ರ ಪ್ರೇಮವನ್ನು ಮೆರೆಯಬೇಕೆಂಬ ಭಾವನೆಯನ್ನು ಮೂಡಿಸುವುದು ನವೋದಯ ಕಾವ್ಯದ ಪ್ರಮುಖ ಅಂಶಗಳಾಗಿವೆ.

ಭಾರತಾಂಬೆಯ ಮಕ್ಕಳಾದ ನಾವೆಲ್ಲರೂ ಒಂದೇ ಎಂಬ ಭಾವನೆಯಿಂದ ಭಾರತೀಯತೆಯನ್ನು ಮೆರೆಯಬೇಕು. ನಮ್ಮ ತನವನ್ನು ನಾವು ಪರಕೀಯರಿಗೆ ಬಿಟ್ಟು ಕೊಡಬಾರದೆಂಬ ಎಚ್ಚರಿಕೆಯನ್ನು ನವೋದಯ ಕವಿಗಳು ನೀಡಿದರು. ರಾಷ್ಟ್ರ ಪ್ರೇಮವನ್ನು ಮೂಡಿಸುವ ಕವನವನ್ನು ರಚಿಸುವ ಮೂಲಕ ತಮ್ಮ ಅಪಾರವಾದ ದೇಶ ಭಕ್ತಿಯನ್ನು ನಿರ್ಮಲವಾಗಿ ಪ್ರಕಟಿಸಿದ್ದಾರೆ.

`` ಕನ್ನಡದ ಗೋಲ್ಡ್ ಸ್ಮಿತ್" ಎಂದು ಹೆಸರಾದ ಎಂ.ಎನ್.ಕಾಮತ್ ಅವರ `ಮೌರ್ಯ ಸಿಂಹಾಸನ' ಎಂಬ ನಾಟಕದಲ್ಲಿ ಹಾಡುಗಳು ಭಾವಗೀತೆಗಳೇ ಆಗಿವೆ. ಅಲ್ಲಿ ಭಾರತ ದೇಶವನ್ನು ಕುರಿತಂತೆ

``ಏಳು ಭಾರತ ಜನನಿ; ಏಳು ಕಲ್ಯಾಣಿ

ಭಾರತೇಶ ದೇಶ ರೂಪ

ಸಾರ ಚೇತನ ಧರ್ಮರೂಪ"

ಎಂಬ ಸಾಲುಗಳಲ್ಲಿ ಉಜ್ವಲ ರಾಷ್ಟ್ರಾಭಿಮಾನವನ್ನು ಕಾಣಬಹುದು``.[5]

ಕುವೆಂಪುರವರ-``ಭಾರತ ತಪಸ್ವಿನಿ", ಗೋವಿಂದ ಪೈಯವರ-`` ಹೊಲೆಯನಾರು``, ``ಹಿಂದೂಸ್ತಾನ್ ಹಮಾರಾ", ಬೇಂದ್ರೆಯವರ ``ಏನೆಂದರೂ ನಾವೆಲ್ಲರೂ ಒಂದೇ", ಶಾಂತ ಕವಿಯ ``ನಮ್ಮದೀ ನಮ್ಮದೀ ಭರತಭೂಮಿ" ಮುಂತಾದವುಗಳನ್ನು

ಹೆಸರಿಸಬಹುದು.

ಹೋರಾಟಗಾರರು ನವೋದಯ ಕಾವ್ಯದಲ್ಲಿ ಸ್ಥಾನವನ್ನು ಪಡೆದರು. ಭಾರತದ ಜನರನ್ನು ಸಾಂಸ್ಕೃತಿಕವಾಗಿ ಮೇಲೆತ್ತಲು ಶ್ರಮಿಸಿದರು. ಸಮಾಜ ಸುಧಾರಕರು, ಸ್ವಾತಂತ್ರ್ಯಕ್ಕಾಗಿ ಹೋರಾಡಿದ ನಾಯಕರನ್ನು ಕುರಿತಂತೆ ಕವನಗಳು ರಚಿತವಾದವು. ಮಹಾತ್ಮಗಾಂಧಿ, ಸ್ವಾಮಿ ವಿವೇಕಾನಂದ, ರಾಮಕೃಷ್ಣ ಪರಮಹಂಸ, ರವೀಂದ್ರ ನಾಥ ಠಾಗೂರ್ ಮುಂತಾದ ರಾಷ್ಟ್ರೀಯ ನಾಯಕರ ವ್ಯಕ್ತಿತ್ವ, ಅವರ ಉದಾತ್ತತೆ, ಆದರ್ಶಗಳು, ಅವರು ಪ್ರತಿಪಾದಿಸಿದ ಸಮಾಜಿಕ ಮೌಲ್ಯಗಳಾದ ಸತ್ಯ, ಅಹಿಂಸೆ, ನ್ಯಾಯ, ನೀತಿ, ಧರ್ಮ ಮೊದಲಾದವುಗಳ ಪ್ರತಿಪಾದನೆಯನ್ನು ನವೋದಯ ಕಾವ್ಯದಲ್ಲಿ ಅಚ್ಚೊತ್ತಲು ಪ್ರಯತ್ನಿಸಿದಂತೆ ಕಾಣುತ್ತದೆ. ಕುವೆಂಪು ಅವರ `` ಸ್ವಾಮಿ ವಿವೇಕಾನಂದ", `` ಮಹಾತ್ಮ ಗಾಂಧಿ" , ಬೇಂದ್ರೆಯವರು - `ಗಾಂಧಿವಾದಿ`, `ರವೀಂದ್ರರಿಗೆ`, `ವೃದ್ಧಗಾಂಧಿ`, `ಮಹಾತ್ಮ`, `ಧ್ರುವತಾರೆ`, `ಗಾಂಧಿ-ಸತ್ಯ`, `ಹುತಾತ್ಮ-ಮಹಾತ್ಮ`, `ಜಯಂತಿ`, `ಗಾಂಧಿ ಭಸ್ಮ`, `ಕೇಳಿರೊಂದು ಸೋಜಿಗ` ಮೊದಲಾದ ಕವನಗಳನ್ನು ರಚಿಸಿದ್ದಾರೆ.

ನವೋದಯ ಕವಿಗಳು ಬದುಕಿನ ಚೆಲುವನ್ನು ಸವಿಯ ಬಲ್ಲವರಾಗಿದ್ದಂತೆ ಸಾಮಾಜಿಕ ಬದಲಾವಣೆಯ ಅಗತ್ಯವನ್ನು ಮನಗಂಡಿದ್ದರು. ನವೋದಯ ಕವಿಗಳು ದೇಶಕ್ಕೆ ಸ್ವಾತಂತ್ರ್ಯ ಎಷ್ಟು ಮುಖ್ಯವೋ, ಅಂದಿನ ಸಮಾಜದಲ್ಲಿನ ಲೋಪದೋಷಗಳ ನಿವಾರಣೆಯೂ ಮುಖ್ಯವೆಂಬುದನ್ನು ಅರಿತಿದ್ದರು. ಸಮಾಜದಲ್ಲಿನ ಮೌಢ್ಯಗಳನ್ನು ತಿರಸ್ಕರಿಸುತ್ತಾ, ಸಾಮಾಜಿಕ ಕಟ್ಟಲೆಗಳನ್ನು ವಿಮರ್ಶಿಸುತ್ತಾ, ಜಾತಿ, ದೇವದಾಸಿ ಪದ್ಧತಿ, ವೈಧವ್ಯ, ಧರ್ಮದ ಹೆಸರಿನಲ್ಲಿ ಕ್ರೌರ್ಯದಂತಹ ಅನೇಕ ಸಾಮಾಜಿಕ ವಿಷಮತೆಯನ್ನು ಪ್ರಸ್ತಾಪಿಸಿದರು.

``ಯಾವ ಕಾಲದ ಶಾಸ್ತ್ರವೇನು ಹೇಳಿದರೇನು ?
ಎದೆಯ ದನಿಗೂ ಮಿಗಿಲು ಶಾಸ್ತ್ರವಿಹುದೇನು ?''[6]

ಎನ್ನುವ ಕವಿ ಅರ್ಥ ರಹಿತ ಸಾಮಾಜಿಕ ಕಟ್ಟಲೆಗಳನ್ನು ವಿಮರ್ಶಿಸುತ್ತಾ ತಿರಸ್ಕರಿಸಿದರು. `ಪುಟ್ಟ ವಿಧವೆ'ಯನ್ನು ಕಂಡ ಕವಿ ಆಕೆಯನ್ನು ಸಮಾಜ ಹೇಗೆ ಅಪಮಾನ, ಅವಮಾನಗಳಿಗೆ ದೂಡುತ್ತದೆ ಹಾಗೂ ಅವಳು ಸಾಮಾಜಿಕ ಬಂಧನದೊಳಗೆ ಸಿಲುಕಿ, ಅದರಿಂದ ಹೊರಬರಲಾರದೆ ನೊಂದು ಕಣ್ಣೀರಿಡುವುದನ್ನು ಹೇಳಿದ್ದಾರೆ. ಸಮಾಜದಲ್ಲಿ ತಿರಸ್ಕರಿಸಲ್ಪಟ್ಟ ವಸ್ತುಗಳನ್ನು ಕುರಿತು ಕಾವ್ಯ ರಚಿಸಿ ಸಮಾನತೆಯನ್ನು ಪ್ರತಿಪಾದಿಸುತ್ತಾ ಸಾಮಾಜಿಕ ಪರಿವರ್ತನೆಗೆ ಮುಂದಾದರು.

ಭಾರತದಲ್ಲಿದ್ದ ಪ್ರಭುತ್ವ ಪದ್ಧತಿ ಅಂದರೆ ಪ್ರಬಲ ರಾಜರು ತಮ್ಮ ಶಕ್ತಿ ಸಾಮರ್ಥ್ಯಗಳಿಗನುಸಾರವಾಗಿ ಸಾಮ್ರಾಜ್ಯವನ್ನು ಕಟ್ಟಿಕೊಂಡು ಮೆರೆಯುತ್ತಿದ್ದರು. ಬ್ರಿಟಿಷರು ಭಾರತದ ರಾಜಕೀಯವನ್ನು ನಿಧಾನವಾಗಿ ಪ್ರವೇಶಿಸಿದರು. ಇವರು ರಾಜರನ್ನು ತಮ್ಮ ಕಡೆ ಸೆಳೆದುಕೊಂಡು ಆ ಮೂಲಕ ರಾಜ್ಯಾಡಳಿತದಲ್ಲಿ ಭಾಗವಹಿಸಿದರು. ಇವರ ಆಧಿಪತ್ಯವನ್ನು ಒಪ್ಪದ ಅರಸರುಗಳ ಮೇಲೆ ನಿರ್ಬಂಧಗಳನ್ನು ವಿಧಿಸುತ್ತಿದ್ದರು. ಇದೆಲ್ಲವನ್ನು ಧಿಕ್ಕರಿಸಿ ನಿಂತವರು ಕೆಲವರು. ನಮ್ಮವರಲ್ಲಿಯೇ ಒಗ್ಗಟ್ಟಿಲ್ಲದ ಈ ಸಂದರ್ಭವನ್ನು ಉಪಯೋಗಿಸಿಕೊಂಡು ಒಡೆದು ಆಳುವ ನೀತಿಯನ್ನು ಬಳಸಿದರು. ಬ್ರಿಟೀಷರ ಮತ್ತು ಆಳರಸರ ಆಡಳಿತವನ್ನು ಕಂಡು ಬೇಸತ್ತಿದ್ದ ಜನತೆ ತಮ್ಮದೇ ಆದ ಸರಕಾರವನ್ನು ರಚನೆ ಮಾಡಿಕೊಳ್ಳಲು ಹಾತೊರೆಯುತ್ತಿದ್ದರು. ಸ್ವಾತಂತ್ರ್ಯ ದೊರೆತರೆ ಮುಕ್ತ ರಾಜ್ಯವನ್ನು ನಿರ್ಮಿಸಿಕೊಂಡು, ಜನರು ತಮ್ಮ ಸರಕಾರವನ್ನು ತಾವೇ ನಡೆಸುವ ಜವಾಬ್ದಾರಿಯನ್ನು ಪಡೆಯಲು ಉತ್ಸುಕರಾದರು. ಈ ಎಲ್ಲ ಅಂಶಗಳನ್ನು

ಕಾವ್ಯದಲ್ಲಿ ತರುವುದರ ಮೂಲಕ ಜನತೆಯನ್ನು ಮತ್ತಷ್ಟು ಜಾಗೃತಗೊಳಿಸಲಾಯಿತು. ಇದರಿಂದ ಪ್ರಜಾರಾಜ್ಯ ನಿರ್ಮಾಣಕ್ಕೆ ಅವಕಾಶ ಒದಗಿ ಬಂದು ಸರ್ವ ಸಮಾನ ಸಮಾಜವನ್ನು ಸ್ಥಾಪಿಸಲು ನವೋದಯ ಕಾವ್ಯ ಹಾತೊರೆದಂತಿದೆ.

`ಶ್ರೀ ಸಾಮಾನ್ಯ'ನಿಗೆ ಕಾವ್ಯದಲ್ಲಿ ಸ್ಥಾನವನ್ನು ಕೊಟ್ಟವರು ಕುವೆಂಪುರವರು. ಇದರಿಂದ ಸಮಾಜದಲ್ಲಿ ಸಂಕಷ್ಟ ಸ್ಥಿತಿಯಲ್ಲಿದ್ದ ಸಾಮಾನ್ಯನನ್ನು ಭಗವಂತನ ಸ್ಥಾನಕ್ಕೇರಿಸುವ ಮೂಲಕ ಆತನಲ್ಲಿ ವಿಶಿಷ್ಟ ಶಕ್ತಿಯಿರುವುದನ್ನು ಗುರುತಿಸಿ ತೋರಿಸಿಕೊಟ್ಟರು. ಶ್ರೀ ಸಾಮಾನ್ಯನ ಉದ್ಧಾರವಾಗದೆ ಈ ದೇಶದ ಉದ್ಧಾರವಾಗಲು ಸಾಧ್ಯವಿಲ್ಲ. ಅವರಲ್ಲಿರುವ ಚೈತನ್ಯಕ್ಕೆ ಕಾವುಕೊಟ್ಟರೆ ಪ್ರಗತಿಯ ಪಥದಲ್ಲಿ ಸಾಗಲು ಸಾಧ್ಯವಾಗುತ್ತದೆ. ಸಮಾಜದಲ್ಲಿ ಮೇಲ್ವರ್ಗ ಕೆಳವರ್ಗ ಎಂಬ ಅಂತರಗಳಿರುವವರಿಗೆ ಸಾಮಾಜಿಕ ನ್ಯಾಯ ದೊರೆಯುವುದಿಲ್ಲ. ಸ್ವತಂತ್ರ ಭಾರತದಲ್ಲಿ ಅಸಮಾನತೆ, ಅನ್ಯಾಯಗಳಿಗೆ ಅವಕಾಶ ಕೊಡದೆ ಶ್ರೀ ಸಾಮಾನ್ಯನ ಏಳಿಗೆಗಾಗಿ ಸರ್ಕಾರ ಶ್ರಮಿಸಬೇಕೆಂದು ಕಾವ್ಯದ ಮೂಲಕ ತಿಳಿಸಿದರು.

ಬ್ರಿಟಿಷರ ಒಡೆದು ಆಳುವ ನೀತಿಯಿಂದಾಗಿ ವಿಶಾಲ ಭೂ ಪ್ರದೇಶದಲ್ಲಿ ಕನ್ನಡ ಮಾತನಾಡುವ ಜನರು ಹಂಚಿ ಹೋಗಿದ್ದರು. ಕರ್ನಾಟಕದ ಪ್ರಾಚೀನ ಭಾಷೆ ಮತ್ತು ಸಂಸ್ಕೃತಿಯ ಹಿರಿಮೆಯನ್ನು ಕಾಪಾಡುವ ಹಾಗೂ ಹರಿದು ಹಂಚಿ ಹೋಗಿದ್ದ ಕರ್ನಾಟಕವನ್ನು ಒಂದುಗೂಡಿಸುವ ಉದ್ದೇಶದಿಂದ ಕನ್ನಡಿಗರು ಚಳವಳಿಯನ್ನು ಪ್ರಾರಂಭಿಸಿದಾಗ ಕನ್ನಡಿಗರು ನಿರ್ದಿಷ್ಟ ಭೂ ಪ್ರದೇಶದಲ್ಲಿ ಒಂದೇ ರಾಜಕೀಯ ಗಡಿಯಲ್ಲಿ ನೆಲೆಯೂರಲು ಹೋರಾಟವನ್ನು ನಡೆಸಿದರು. ಕನ್ನಡ ನಾಡು-ನುಡಿ, ಸಂಸ್ಕೃತಿಯನ್ನು ಕುರಿತು ಕವಿಗಳು ಕನ್ನಡಿಗರ ಮನ ಕಲಕುವಂತೆ ಅನೇಕ ಕವನಗಳನ್ನು ರಚಿಸಿ ಹಾಡಿದರು. ಭಾರತ ಸ್ವಾತಂತ್ರ್ಯ ಹೋರಾಟದಂತೆಯೇ ಕರ್ನಾಟಕ ಏಕೀಕರಣ ಚಳವಳಿಯು ಪ್ರಬಲವಾಗಿಯೇ ನಡೆದು ಕರ್ನಾಟಕ ಏಕೀಕರಣವಾಯಿತು. ಹೀಗೆ ನವೋದಯ ಕಾವ್ಯದಲ್ಲಿ ಸ್ವಾತಂತ್ರ್ಯ ಹೋರಾಟದ ಪರಿಕಲ್ಪನೆಯು ಮೂಡಿ ಬಂದಿದ್ದು, ಮೇಲೆ ತಿಳಿಸಲಾಗಿರುವ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಆ ಅಂಶಗಳು ವ್ಯಕ್ತವಾಗಿರುವ ಕವಿತೆಗಳನ್ನು ಆಯ್ದು ವಿಶ್ಲೇಷಣೆಗೆ ಒಳಪಡಿಸಲಾಗಿದೆ.

## ಅಡಿ ಟಿಪ್ಪಣಿಗಳು

1. ರಾಜಪ್ಪ ದಳವಾಯಿ; ಕನ್ನಡ ಸಾಹಿತ್ಯ ಕೋಶ; ಪುಟ-308

2. ಕೆ.ಇ.ರಾಧಾಕೃಷ್ಣ;ಗೋವಿಂದಪೈ ಸಂಸ್ಕೃತಿ ಲೋಕ; ಪುಟ-115

3. ರಾಜಪ್ಪ ದಳವಾಯಿ;ಕನ್ನಡ ಸಾಹಿತ್ಯ ಕೋಶ;ಪುಟ-312

4. ದೊಡ್ಡರಂಗೇಗೌಡ;ಕನ್ನಡ ನವೋದಯ ಕಾವ್ಯ ಪುನರ್ ಮೌಲ್ಯಮಾಪನ;ಪುಟ-377

5.ಅದೇ... ಪುಟ-57

6.ಕುವೆಂಪು ಸಮಗ್ರ ಕಾವ್ಯ; ಸಂಪುಟ-1, ಪುಟ-368

# ಅಧ್ಯಾಯ-೫

# ಸ್ವಾತಂತ್ರ್ಯದ ಪರಿಕಲ್ಪನೆ ಕುರಿತ ನವೋದಯ ಕವಿತೆಗಳ ವಿಶ್ಲೇಷಣೆ

## ೧. ಭಾರತೀಯತೆ

`ಜನನೀ ಜನ್ಮ ಭೂಮಿಶ್ಚ ಸ್ವರ್ಗಾದಪಿ ಗರೀಯಸಿ' ಎಂಬ ಬಹು ಪ್ರಾಚೀನ ಉಕ್ತಿಯೊಂದಿದೆ. ಇದಕ್ಕೆ ಜನನಿಯೂ, ಜನ್ಮ ಭೂಮಿಯೂ ಸ್ವರ್ಗಕ್ಕಿಂತಲೂ ಶ್ರೇಷ್ಠ ಎಂದು ಅರ್ಥ. ಬಹುಹಿಂದಿನಿಂದಲೂ ನಮ್ಮ ಜನರ ಸಾಂಸ್ಕೃತಿಕ ಬದುಕಿನಲ್ಲಿ ನಮ್ಮ ಮಾತೃ ಭೂಮಿಯಾದ ಭರತ ಖಂಡದ ಮೇಲೆ ಪ್ರೇಮ ಬೆಳೆದು ಬಂದಿದೆ. ಆದರೆ ಭಾರತ ಮಹಾಭಾರತ ಕಾಲದಿಂದಲೂ ಯಾದವೀ ಕಲಹಕ್ಕೆ ಒಳಗಾಗಿ, ಹಲವು ರಾಜ್ಯಗಳಾಗಿ ವಿಭಾಗವಾಗಿ ಪ್ರಾದೇಶಿಕ ಪ್ರಜ್ಞೆ ಬಂದಿದೆ. ನಮ್ಮ ದೇಶವನ್ನು ಯವನರು, ಮುಸಲ್ಮಾನರು, ಬ್ರಿಟಿಷರು ಆಕ್ರಮಿಸ ತೊಡಗಿದ ಮೇಲೆ ಅಖಂಡ ಭಾರತದ ಪ್ರಜ್ಞೆ ಕಡಿಮೆಯಾಗುತ್ತಾ ಹೋಯಿತು. ಬ್ರಿಟಿಷರ ಹಿಡಿತದಲ್ಲಿದ್ದ ಭಾರತವನ್ನು ಬಂಧ ಮುಕ್ತಗೊಳಿಸಿ, ಸ್ವತಂತ್ರ ರಾಷ್ಟ್ರವಾಗಿ ನಿರ್ಮಾಣಮಾಡುವಾಗ, ಭಾರತ ಸ್ವಾತಂತ್ರ್ಯ ಹೋರಾಟಗಾರರು ಭಾರತೀಯತೆಯನ್ನು ಮೂಡಿಸಿದರು. ಭಾರತೀಯರಾದ ನಾವೆಲ್ಲರೂ ಒಂದೇ, ನಮ್ಮ ಮಾತೃಭೂಮಿಯನ್ನು ರಕ್ಷಿಸುವ ಹೊಣೆ ನಮ್ಮದು ಎಂಬ ದೇಶಾಭಿಮಾನವನ್ನು ಬಿತ್ತಿ, ರಾಷ್ಟ್ರೀಯ ಪ್ರಜ್ಞೆಯನ್ನು ಮೊಳೆಯಿಸಿದರು. ಭಾರತದ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಹೋರಾಟಗಾರರೆ, ಅಲ್ಲದೆ ನವೋದಯ ಕವಿಗಳು ತಮ್ಮ ಕಾವ್ಯದ ಮೂಲಕ ಭಾರತೀಯತೆ, ರಾಷ್ಟ್ರೀಯ ಪ್ರಜ್ಞೆ ಚಿಗುರುವಂತೆ ಮಾಡಿದರು.

ರಾಷ್ಟ್ರ ಪ್ರೇಮಿಗಳಾದ ಗೋವಿಂದ ಪೈ ಅವರು ರಾಷ್ಟ್ರೀಯ ಭಾವನೆಯನ್ನು ಮೂಡಿಸುವಂತಹ ಹಲವಾರು ಕವಿತೆಗಳನ್ನು ರಚಿಸಿದ್ದಾರೆ.

``ಭಾರತವನುಳಿಯುತ್ತ ಅನ್ಯ ಜೀವನವೆತ್ತ
ಭಾರತವೆನ್ನುಸಿರು ನನ್ನೊಗೆದ ಬಸಿರು
ಭಾರತವೆ ಧನಧಾನ್ಯ, ಭಾರತವೆ ಮನೆ ಮಾನ್ಯ
ಭಾರತವೇ ದೇವಾರವೆನ್ನ ಸಂಸಾರ''.[1]

ನಮ್ಮ ಮಾತೃ, ಮನೆ, ಜೀವನವನ್ನೆಲ್ಲವೂ ಭಾರತವೇ, ಭಾರತಾಂಬೆಯ ಮಕ್ಕಳಾದ ನಮ್ಮ ಉಸಿರು, ಬಸಿರು, ಜೀವನ, ಧನಧಾನ್ಯವೆಲ್ಲವೂ ಭಾರತ. ಜೀವನ ನೀಡಿರುವ ನಮ್ಮ ತಾಯಿಗೆ ದ್ರೋಹ ವೆಸಗದೆ, ಸಂಕಷ್ಟದಲ್ಲಿರುವ ಮಾತೆಯ ಏಳಿಗೆಗಾಗಿ ದುಡಿಯುವವ ಭಾರತೀಯನೆನೆಸಿಕೊಳ್ಳುತ್ತಾನೆ. ಇದನ್ನು ಅವರು `ಹಿಂದೂಸ್ತಾನ್ ಹಮಾರಾ` ಎಂಬ ಕವನದಲ್ಲಿ

``ನಮ್ಮವಳೀ ಭಾರತ ಜನನೀ
ಭೂಮಂಡಲದಿ ರಮಣಿಯಂ
ಈ ಭಾರತ ವೆಮ್ಮಯ ನಿಲಯಂ;
ನಾವೀಕೆಯ ಮರಿದುಂಬಿಗಳು
ಈಕೆಯೆಮ್ಮ ಜೀವನನಳಿನಿ''.[2]

ಸಮಾಜದಲ್ಲಿ ಹೊಲೆಯ ಎಂಬ ಪದ ತುಂಬ ನಿಕೃಷ್ಟತೆಯ ಸಂಕೇತವಾಗಿ ಬಳಕೆಯಾಗುತ್ತಿದೆ. ಆ ನಿಕೃಷ್ಟತೆಯ ರೀತಿಯನ್ನು ಅರ್ಥಗರ್ಭಿತವಾಗಿ ತುಂಬಿ ಕೊಟ್ಟಿದ್ದಾರೆ. `ಹೊಲೆಯನು ಯಾರು?` ಎನ್ನುವ ಕವನವು ಮೇಲ್ನೋಟಕ್ಕೆ ಹೊಲೆಯನನ್ನು ಕುರಿತದ್ದರಂತೆ ಕಂಡರೂ ಆಂತರ್ಯದಲ್ಲಿ ರಾಷ್ಟ್ರೀಯತೆಯ ಬೆಳಕಿರುವುದನ್ನು ಕಾಣಬಹುದು.

**``ರಾಷ್ಟ್ರದುನ್ನತಿಯ ಸಾಧಿಸೆ ಶ್ರಮಿಸದವ ಹೊಲೆಯ**

**ತನ್ನ ರಾಷ್ಟ್ರಕ್ಕೆ ದ್ರೋಹ ಚಿಂತಿಪನೆ ಹೊಲೆಯ**

**ಸ್ವಾರ್ಥದಿಂ ರಾಷ್ಟ್ರಹಿತವನು ಮರೆವವನು ಹೊಲೆಯ**

**ರಾಷ್ಟ್ರಭಕ್ತಿಯ ಲವಲೇಶವಿಲ್ಲದವ ಹೊಲೆಯ".**[3]

ನಮ್ಮ ಪೊರೆದ ಮಾತೆಗೆ ದ್ರೋಹ ವೆಸಗುವ, ಹಾಲು ಕೊಟ್ಟ ತಾಯಿಗೆ ವಿಷ ಉಣಿಸುವವನನ್ನು ಹೊಲೆಯನೆಂದು ಕರೆದು, ಆಕೆಯ ಮಕ್ಕಳು ಹೇಗಿರಬೇಕೆಂಬ ನಿರೀಕ್ಷೆಯನ್ನು ಅರಿಯುವುದಾದರೆ, ರಾಷ್ಟ್ರದ ಅಭ್ಯುದಯಕ್ಕಾಗಿ, ಪ್ರತಿಫಲಾಪೇಕ್ಷೆಯಿಲ್ಲದೆ ನಿಸ್ವಾರ್ಥತೆಯಿಂದ ದುಡಿಯಬೇಕೆನ್ನುತ್ತಾರೆ.

ರಾಜಕೀಯ ವ್ಯವಸ್ಥೆಯ ಕ್ರೌರ್ಯಗಳನ್ನು ಕಂಡು ಸಹಿಸದೆ, ಅದರ ಬದಲಾವಣೆಗೆ ರಾಷ್ಟ್ರದ ಜನರೆಲ್ಲರು ಒಗ್ಗೂಡಿದರೆ ಮಾತ್ರ ಸಾಧ್ಯ ಎಂಬುದನ್ನು ಅರಿತು ಸಾಮಾನ್ಯರಲ್ಲಿ ಭಾರತೀಯತೆಯನ್ನುಂಟು ಮಾಡಲು ಶ್ರಮಿಸಿದ ಕವಿ ರಾಷ್ಟ್ರಕವಿ ಕುವೆಂಪು. ಭಾರತಾಂಬೆಯ ಮಡಿಲಲ್ಲಿ ಜನಿಸಿದ ಕವಿಗೆ ಧನ್ಯತೆಯ ಭಾವವಿದೆ. ಅದನ್ನೇ ಅವರು,

**``ಭಾರತಾಂಬೆಯೆ, ಜನಿಸಿ ನಿನ್ನೊಳು ಧನ್ಯನಾದೆನು, ದೇವಿಯೇ**

**ನಿನ್ನ ಪ್ರೇಮದಿ ಬೆಳೆದು ಜೀವವು ಮಾನ್ಯವಾದುದು, ತಾಯಿಯೇ``**[4] .

ತಾಯಿಯ ಸೇವೆಯನ್ನು ಆಕೆಯ ನೋವು ನಲಿವು, ಮಾನ ಅಪಮಾನ, ಕುಂದುಕೊರತೆ, ಮಹಿಮೆ, ಸೌಭಾಗ್ಯಗಳನ್ನು ಕಾವ್ಯದ ಮೂಲಕ ನಾಡಿನ ಜನತೆಗೆ ಪರಿಚಯಿಸುವ, ಎಚ್ಚರಿಸುವ ಕವಿ ಧನ್ಯರಾಗುತ್ತಾರೆ. ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ರಚಿತವಾದ `ಭರತ ಮಾತೆ` ಕವಿತೆಯಲ್ಲಿ

**``ಅಯ್ಯೊ ನಾನೆ ತಿಳಿಯದಂತೆ**

**ನನಗೆ ಮುಕ್ತಿ ದೊರಕಿತಂತೆ!**

**ಎಂಥ ಮುಕ್ತಿಯೋ! ಅದು**

**ಎಂಥ ಮುಕ್ತಿಯೋ!**[5]

ಬಂಧನದಿಂದ ಬಿಡುಗಡೆ ಬಯಸಿರುವ ಭಾರತಾಂಬೆಗೆ ಮುಕ್ತಿ ದೊರೆಯುವುದು ಆಶ್ಚರ್ಯವಾಗಿ ಕಂಡಿದೆ. ದೊರೆಯುತ್ತಿರುವ ಮುಕ್ತಿಯಲ್ಲಿ ಹುರುಳಿಲ್ಲವೆಂಬ ವ್ಯಥೆಯಿದೆ.

**``ಮೈಯಲುಗಿಸ ಬಾರದಂತೆ**

**ಕೈಯಲುಗಿಸ ಬಾರದಂತೆ**

**ನುಡಿಯೆ ಹಕ್ಕೆ ಇಲ್ಲವಂತೆ!**

**ಅಂತು ನನಗೆ ಮುಕ್ತಿಯಂತೆ!``[6]**

ದೇಶದಲ್ಲಿ ನಡೆಯುತ್ತಿದ್ದ ಅನ್ಯಾಯ, ದೌರ್ಜನ್ಯಗಳಿಂದ ಮುಕ್ತಿ ಪಡೆಯಬೇಕು. ಅದು ಸಂಕೋಲೆಗಳ ಮುಕ್ತಿಯಾಗಬಾರದು. ಮಹಾಹತುಶಾಹಿ ರಾಷ್ಟ್ರಗಳು ತಮ್ಮ ಹಿತಾಸಕ್ತಿಗಳನ್ನು ಕಾಯ್ದುಕೊಳ್ಳಲು ಬೇಕಾದ ತಂತ್ರಗಳನ್ನೆಲ್ಲಾ ರೂಪಿಸಿದ್ದರು. ಇದರಿಂದ ನಮ್ಮ ನಾಡಿನಲ್ಲಿ ನಾವು ಯಾವುದೇ ಕೆಲಸವನ್ನು ಮಾಡಲು, ಅವರು ರೂಪಿಸಿದ್ದ ನಿಯಮಗಳು ಅಡ್ಡಿಯಾಗುತ್ತಿದ್ದವು. ಹಾಗಾಗಿ ಅವುಗಳಿಂದ ಸಂಪೂರ್ಣವಾಗಿ ಬಿಡುಗಡೆ ಹೊಂದಬೇಕಾದ ಅನಿವಾರ್ಯತೆಯನ್ನು ಹೇಳುತ್ತಾರೆ.

**``ಭರತ ಭೂಮಿ ನನ್ನ ತಾಯಿ,**

**ನನ್ನ ಪೊರೆವ ತೊಟ್ಟಿಲು;**

**ಜೀವವನೆ ದೇವಿಗೆರೆವೆ**

**ಬಿಡುತೆ ಗುಡಿಯ ಕಟ್ಟಲು.''[7]**

ಮನದಲ್ಲಿಯೇ ಗುಡಿಯನ್ನು ಕಟ್ಟಿ, ಜೀವನವನ್ನೇ ದೇವಿಗೆ ಅರ್ಪಿಸಬೇಕು. ಏಕೆಂದರೆ ಈ ಭೂಮಿ ನನ್ನ ತಾಯಿ, ಸಾಕಿ ಸಲುಹಿದ ತೊಟ್ಟಿಲು ಈ ನಾಡು. ಅದರ ಉಳಿವಿಗಾಗಿ, ಬೆಳವಣಿಗೆಗಾಗಿ ತರುಣರಿಗೆ ಕರೆಕೊಡುತ್ತಾರೆ. ರಾಜ ಮಹಾರಾಜರ, ಬ್ರಿಟಿಷರ ಆಳ್ವಿಕೆಯಿಂದ ಬಿಡುಗಡೆ ಹೊಂದಿ ಹೊಸ ಕಾಲದ ಉದಯವಾಗಲು ಯುವಕರು ಎಚ್ಚರಗೊಳ್ಳಬೇಕು.

**``ಹೋಗುತಿದೆ ಹಳೆಕಾಲ, ಹೊಸಕಾಲ ಬರುತಲಿದೆ,**

**ಬರುತಲಿದೆ ಹೊಸದೃಷ್ಟಿ, ಹೊಸ ಬಯಕೆಗಳಲಿ**

**ಹೋಗುತಿದೆ ಹಳೆಬಾಳು, ಹೊಸ ಬಾಳು ಬರುತಲಿದೆ,**

**ಬರುತಲಿದೆ ಕುದಿಗೊಂಡು ತರುಣರೆದೆಗಳಲಿ**

**ತರುಣರಿರ ಎದ್ದೇಳಿ! ಎಚ್ಚರಗೊಳ್ಳಿ! ಕೇಳಿ!``[8]**

ಈ ಮೂಲಕ ಹೊಸ ಬದುಕಿಗಾಗಿ ಕವಿಯ ಮನಸ್ಸು ಮಿಡಿಯುತ್ತಿರುವುದನ್ನು ನೋಡಬಹುದು. ದೇಶಾಭಿಮಾನಿಯಾದ ಕವಿಗೆ ಭಾರತಾಂಬೆಗೆ ಇದುವರೆವಿಗೂ ಆಗಿರುವ ಸಂಕಷ್ಟಗಳ ಕಥೆಯನ್ನು ಹೇಳಿದರೆ ಕಣ್ಣು ತುಂಬಿಬರುತ್ತದೆ. ಹಾಗಾಗಿ,

**``ನಿನ್ನ ಸುಲಿಗೆಯ ಕತೆಯನೋದುತಿರೆಯಿರೆ ಕಣ್ಣು**

**ಹನಿ ತುಂಬಿ ಮಂಜಾಗುವುದು``.[9]**

ಭಾರತಾಂಬೆಯ ವ್ಯಥೆಯ ಕಥೆಯನ್ನು ಕೇಳಿದಾಗ ಆಗುವ ಅನುಭವಗಳನ್ನು ಇಲ್ಲಿ ತೋಡಿಕೊಂಡಿದ್ದಾರೆ. ಕುವೆಂಪುರವರು `ಭಾರತ ಜನನಿಗೆ`, `ಭರತ ಮಾತೆಗೆ`, `ಭರತ ಭೂಮಿನನ್ನ ತಾಯಿ`, `ರಾಷ್ಟ್ರೀಯ ವಿಷಮತೆ` `ದೇಶಭಕ್ತಿನೋರ್ವನಿಗೆ`, `ಭಾರತ ತಪಸ್ವಿನಿ`, ಇನ್ನೂ ಮುಂತಾದ ಕವಿತೆಗಳಲ್ಲಿ ಭಾರತವು ಜಗದ ಬೆಳಕಾಗಬೇಕೆಂಬ ಆಶಯವನ್ನು ಅಭಿವ್ಯಕ್ತಿಸಿದ್ದಾರೆ.

ರಾಷ್ಟ್ರೀಯ ಮನೋಭಾವವನ್ನು ಬೆಳೆಸಿರುವ ನವೋದಯ ಕವಿಗಳಲ್ಲಿ ದ.ರಾ.ಬೇಂದ್ರೆಯವರು ಒಬ್ಬರು. ಇವರಲ್ಲಿ ರಾಷ್ಟ್ರೀಯ

ಭಾವನೆ ಕೇವಲ ಭಾರತೀಯರೆಲ್ಲರೂ ಒಂದೇ ಎಂಬುದ್ಕಕಿಂತ ಇಡೀ ಭೂಮಂಡಲದ ಮಾನವರೆಲ್ಲರೂ ಒಂದೇ ಎಂಬ ಕಲ್ಪನೆಯನ್ನು ತಂದಿದ್ದಾರೆ.

ಅದನ್ನೇ ಅವರು `ಜನವೇ ರಾಷ್ಟ್ರ` ಎಂಬ ಕವಿತೆಯಲ್ಲಿ `ಜನವೇ ರಾಷ್ಟ್ರವು, ರಾಷ್ಟ್ರವೇ ಜನರು` ಎನ್ನುವ ಮೂಲಕ ರಾಷ್ಟ್ರದ ಹಿರಿಮೆಯ ಪ್ರತೀಕ ಜನತೆಯ ಹೃದಯವಂತಿಕೆಯಾಗಿದೆ ಎಂಬುದನ್ನು ತಿಳಿಸಿದ್ದಾರೆ.

**``ಭಾರತಂ ವಂದೇs**

**ಒಂದೇ ಭಾರತಂ``[10].**

ಸ್ವಾರ್ಥ ರಹಿತ ಭಾರತಕ್ಕೆ ವಂದನೆಗಳು, ಅದಕ್ಕಾಗಿ ದುಡಿಯಬೇಕು ಭಾರತೀಯರು ಒಂದಾಗಿ ಎಂಬ ಕಳಕಳಿಯಿದೆ. ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ ನಮ್ಮಲ್ಲಿ ನಡೆಯುತ್ತಿದ್ದ ಒಳ ಜಗಳವನ್ನು ಕಂಡು ಕವಿಯ ಮನಸ್ಸು ಭಾರತೀಯರನ್ನು ಒಂದುಗೂಡಿಸುವ ಕಡೆ ತಿರುಗಿದೆ.

**``ಏನೆಂದರು ನಾವೆಲ್ಲರು ಒಂದೇ**

**ವಂದೇ ಮಾತರಂ ವಂದೇ!**

**ಭಾವದ ರಾಗದ ಕಾಲದ ತಂತ್ರ**

**ಇದು `ಭಾರತಿ` ಮಂತ್ರ"[11].**

ನಮ್ಮಲ್ಲಿರುವ ದ್ವೇಷ, ವೈರತ್ವದ ಭಾವಗಳು ನಾಶವಾಗದ ಹೊರತು ನಮ್ಮೆಲ್ಲರ ಐಕ್ಯ ಸಾಧ್ಯವಿಲ್ಲ.

**``ಇದು ಹಮ್ಮಿದ ವಾಣಿ**

**ನಮ್ಮ ಚುಕ್ಕಾಣಿ``[12].**

ನಮ್ಮದೇ ರಾಷ್ಟ್ರವನ್ನ ನಿರ್ಮಿಸಿಕೊಳ್ಳಲು ಮುನ್ನುಗ್ಗಿ ಎಂದು ಭಾರತೀಯರನ್ನು ಒಂದೆಡೆ ಸೇರಿಸುವ ಪ್ರಯತ್ನ ಮಾಡುತ್ತಾರೆ.

**``ನಮ್ಮ ದೇಶ ಭೂ ಪ್ರದೇಶ**

**ಸಾರ್ವಭೌಮ ಭಾವ**

**ಇದು ಜೀವ ಅದೋ ಆತ್ಮ**

**ಮರೆತವನೇ ಸಾವ"[13].**

ವಿಶಾಲ ಭೂ ಪ್ರದೇಶವನ್ನು ಹೊಂದಿರುವ ನಾಡಾದ ಭಾರತ ಸಾರ್ವಭೌಮತೆಯನ್ನು ಪಡೆದಿದೆ. ನಿಜ ಜೀವನದಲ್ಲಿನ ಸಾರ್ಥಕವಾದ ಬಾಳನ್ನು ನಡೆಸುವುದರಿಂದ ಬದುಕು ಹಸನಾಗುತ್ತದೆ. ಇದನ್ನು ಮರೆತು ಬದುಕುವವನು ಸತ್ತಂತೆಯೇ ಸರಿ ಎಂಬ ಭಾವ ವ್ಯಕ್ತವಾಗಿದೆ.

ಭಾರತದೇಶ ನಮ್ಮದು ಎಂದು ಹೇಳಿಕೊಳ್ಳುವಲ್ಲಿಯೂ ಹೆಮ್ಮೆಯಿದೆ. ಆ ಹೆಮ್ಮೆಯ ಭಾವವನ್ನು ಶಾಂತಕವಿಯವರು `ನಮ್ಮದಿ ನಮ್ಮದಿ ಭರತಭೂಮಿ`` ಎಂಬ ಕವಿತೆಯಲ್ಲಿ ಬಹಳ ವಿಸ್ತಾರವಾಗಿ ಹೇಳಿದ್ದಾರೆ. ಸ್ವಾತಂತ್ರ್ಯ ಹೋರಾಟ ಸಂದರ್ಭದಲ್ಲಿ

ಕಡಂಗೋಡ್ಲು ಶಂಕರಭಟ್ಟರು ಭಾರತ ಗತ ವೈಭವದ ಕನಸ್ಸು ಕಂಡು ಸುಖಿಸುವುದಕ್ಕಿಂತ

**``ಅಳಿದ ಸಾಮ್ರಾಜ್ಯಗಳ ಬಾಳದಿಹ ವೈಭವದ**

**ಕತೆ ಹೇಳಿ ಕಣ್ಣೊರಸಿ ಸವೆದುದಾಯುಷ್ಯಾ**

**ದಾರಿ ಕಂಡುದು ಬುದ್ಧಿ ಕೂಗಿ ಕರೆವುದು ಸಿದ್ಧಿ;**

**ಒಸಗೆ ತೋರಣ ಕಟ್ಟಿ ತೆರೆದಿದೆ ಭವಿಷ್ಯ''.** [14]

ಭವಿಷ್ಯದಲ್ಲಿ ಅದನ್ನು ನನಸು ಮಾಡುವತ್ತ ಹೆಜ್ಜೆಯಿಡುಬೇಕೆನ್ನುತ್ತಾರೆ.

ಸ್ವಾತಂತ್ರ್ಯ ಹೋರಾಟದ ಕಿಚ್ಚನ್ನ ಹತ್ತಿಸಿದ ನವೋದಯ ಕವಿಗಳಲ್ಲಿ ಕೈಯಾರ ಕಿಞ್ಞಣ್ಣರೈ ಅವರು ಒಬ್ಬರು. ಅವರ `ಹಾಡೊಂದ ಹಾಡಬೇಕು`, `ಸಾಗಿದೆ ಸಂಗ್ರಾಮ`, `ಐಕ್ಯಗಾನ` ಕವಿತೆಗಳು ಸ್ವಾತಂತ್ರ್ಯ ಹೋರಾಟದ ಭಾವನಾತ್ಮಕ ಸನ್ನಿವೇಶದಲ್ಲಿ ಮೂಡಿಸಿದ ಹಾಡುಗಳೇ ಆಗಿವೆ.

**``ಐಕ್ಯವೊಂದೇ ಮಂತ್ರ**

**ಐಕ್ಯದಿಂದ ಸ್ವತಂತ್ರ**

**ಐಕ್ಯಗಾನದಿ**

**ರಾಷ್ಟ್ರತೇಲು ತಿರಲಿ!**

**ಭಾರತದಿ ಮರುಜನ್ಮ!**

**ಸ್ವಾತಂತ್ರವೇ ಧರ್ಮ**

**ಒಕ್ಕೊರಲಿನು ಘೋಷ**

**ಕೇಳುತಿರಲಿ''.** [15]

ರಾಷ್ಟ್ರೀಯ ಭಾವೈಕ್ಯತೆಯೆಂಬ ಮಂತ್ರದಿಂದಲೇ ಸ್ವಾತಂತ್ರ್ಯ ಸಾಧ್ಯ. ಆದ್ದರಿಂದ ನಾವೆಲ್ಲರೂ ಒಂದೇ ಎಂಬ ಗಾನ ಮೊಳಗುವುದನ್ನು ಕೇಳಿ ರಾಷ್ಟ್ರ ಆನಂದದಲ್ಲಿ ತೇಲಾಡಬೇಕು. ಆಗ ಭಾರತಕ್ಕೆ ಸ್ವಾತಂತ್ರ್ಯವೆಂಬ ಮರು ಜನ್ಮ ಸಿಗುತ್ತದೆ. ಅದೇ ನಮ್ಮ ಧರ್ಮ ಎಂಬುದು ಎಲ್ಲೆಲ್ಲೂ ಕೇಳಿಬರಬೇಕೆಂದು ಹಂಬಲಿಸುತ್ತಾರೆ. ಈ ಮೂಲಕ ಸಾರ್ವಕಾಲಿಕ ಮೌಲ್ಯವೊಂದನ್ನು ಎತ್ತರದ ದನಿಯಲ್ಲಿ ಬಿತ್ತರಿಸಿದ್ದಾರೆ.

**"ಸ್ವಾತಂತ್ರ್ಯ ಪಡೆಯುವೆವು! ತಲೆಯೆತ್ತಿ ನಡೆಯುವೆವು**

**ವಜ್ರ ದೇಹಿಗಳಾವು - ಬನ್ನಿರೆಲ್ಲ! ಸ್ವಾತಂತ್ರ್ಯವೇ ಪಕ್ಷ**

**ಸ್ವಾತಂತ್ರ್ಯವೆ ಪಥ ಸ್ವಾತಂತ್ರ್ಯವೇ ಜಾತಿ - ಎನ್ನಿರೆಲ್ಲ"**

ಐಕ್ಯತೆಯ ಮಂತ್ರ ಫಲಿಸಿದರೆ ಸ್ವಾತಂತ್ರ್ಯವನ್ನು ಪಡೆದು ತಲೆಯೆತ್ತಿ ನಡೆಯುವೆವು. ಹಾಗಾಗಿ ನಮ್ಮೆಲ್ಲರ ಜಾತಿ, ಮತ, ಪಂಥ, ಪಕ್ಷವೆಲ್ಲವೂ ಸ್ವಾತಂತ್ರ್ಯ ಎಂದು ತಿಳಿದು, ಲೋಕ ಹಿತಕ್ಕಾಗಿ ದುಡಿಯಬೇಕು.

# ಅಡಿ ಟಿಪ್ಪಣಿಗಳು

1. ಗೋವಿಂದಪೈ; ಹೃದಯರಂಗ;ಪುಟ-3

2. ಗೋವಿಂದ ಪೈ;ಗಿಳಿವಿಂಡು;ಪುಟ-11

3.ಅದೇ.. ಪುಟ-16

4.ಕುವೆಂಪು ಸಮಗ್ರ ಕಾವ್ಯ;ಸಂಪುಟ -1;, ಪುಟ-105

5.ಅದೇ.. ಪುಟ-142

6.ಅದೇ.

7.ಅದೇ.. ಪುಟ-378

8.ಅದೇ.. ಪುಟ-370

9.ಅದೇ.. ಪುಟ-514

10.ವಾಮನ ಬೇಂದ್ರೆ;ಅಂಬಿಕಾತನಯದತ್ತ ಸಮಗ್ರ ಕಾವ್ಯ;ಸಂಪುಟ-2; ಪುಟ-311

11.ಅದೇ.. ಪುಟ-313

12.ಅದೇ.

13.ಅದೇ.. ಪುಟ-320

14.ಪು.ತಿ.ನರಸಿಂಹಾಚಾರ್;ಸುವರ್ಣ ಸಂಪುಟ; ಪುಟ-138

15.ಕಯ್ಯಾರ ಕಿಞ್ಞಣ್ಣರೈ; ಶತಮಾನದ ಗಾನ; ಪುಟ-169

## ೨. ಸ್ವಾತಂತ್ರ್ಯ ಆಂದೋಲನ

ಸುಮಾರು ಕ್ರಿ.ಶ.೧೯೨೦ರ ವೇಳೆಗೆ ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕಾವ್ಯದ ಮೂಲಕ ಭಾವ ಪ್ರವಾಹದ ರಾಷ್ಟ್ರೀಯ ಆಯಾಮವನ್ನು ನವೋದಯ ಕವಿಗಳು ಒದಗಿಸಲು ಆರಂಭಿಸಿದರು. ತಮ್ಮ ತನುಮನವನ್ನೆಲ್ಲ ನಾಡಿಗಾಗಿ ಅರ್ಪಿಸಿದ ದೇಶಾಭಿಮಾನಿ ರಾಷ್ಟ್ರೀಯ ಹೋರಾಟಗಾರರ ದಂಡೇ ನಿರ್ಮಾಣವಾಗಿತ್ತು. ಅಂತಹ ಸಂದರ್ಭದಲ್ಲಿ ಅದಕ್ಕೆ ಸ್ಪಂದಿಸಿ ಹೋರಾಟದಲ್ಲಿ ಪಾಲ್ಗೊಂಡ ಕವಿಗಳು ಹಾಗೂ ಜನತೆಯನ್ನು ಪ್ರೇರೇಪಿಸಿದ ಕವಿಗಳೂ ಕಂಡು ಬರುತ್ತಾರೆ. ಹೋರಾಟದಲ್ಲಿ ಸಕ್ರೀಯವಾಗಿ ತೊಡಗಿಸಿ ಕೊಳ್ಳಲು ಬೇಕಾದ ವಾತಾವರಣವನ್ನು ಸೃಷ್ಟಿಸುವಲ್ಲಿ ನವೋದಯ ಕಾವ್ಯ ಪ್ರಯತ್ನಿಸಿದೆ. ಈ ಸಂದರ್ಭದಲ್ಲಿ ಕ್ರಾಂತಿ ಗೀತೆಗಳು, ಅಸಮಾನತೆ, ಅನ್ಯಾಯದ ವಿರುದ್ಧ ಬಂಡೇಳುವಂತಹ, ಭಾರತದ ವೈಭವವನ್ನು ಸಾರುವಂತಹ, ಅಲ್ಲಿ ಬಳಕೆಯಾದ ಸತ್ಯ, ಅಹಿಂಸೆ, ತ್ಯಾಗ, ಬಲಿದಾನ ಎಂಬ ಅಸ್ತ್ರಗಳನ್ನು ಕುರಿತಂತೆ ಕಾವ್ಯ ರಚಿತವಾಯಿತು.

ಆಂಗ್ಲರು ಭಾರತವನ್ನು ಪ್ರವೇಶಿಸುವಾಗ ಆಕ್ರಮಣದ ಯಾವುದೇ ಸುಳಿವು ನೀಡದೆ, ನಮ್ಮನ್ನುದ್ಧರಿಸಲು ಬಂದಂತೆ ಕಂಡು, ನಮ್ಮನ್ನು ಆವರಿಸಿ ನಿಂತಿದ್ದರು. ನಮ್ಮ ಸುತ್ತಲಿನ ಸೆರೆಯಿಂದ ಬಿಡಿಸಿಕೊಳ್ಳುವ ಬೇಗುದಿ ಬರಲೆಂದು ಪಂಜೆ ಮಂಗೇಶರಾಯರು

**"ಹಗ್ಗವಿಲ್ಲದ ಕಟ್ಟು, ಚೆತ್ತವಿಲ್ಲದ ಪೆಟ್ಟು**

**ಹೊಗ್ಗಿತ್ತೇ ಈ ಗತಿಯು ಸವಿ ವಿಷವ ತಿಂದೂ."**[1]

ಅವರ ನಯವಂಚನೆಯ ಬುದ್ಧಿಯನ್ನು ಅರಿತು, ನಿನ್ನ ಜಡ ಬುದ್ಧಿಯನ್ನು ಆಲಸ್ಯ ಸ್ವಭಾವವನ್ನು ಕಳಚಿ ಎಚ್ಚರಗೊಳ್ಳಬೇಕು. ಅದನ್ನೇ

**``ತೂಕಡಿಕೆಯನು ಕಳೆಯದೇಕೆ ಕುಳಿತಿಹೆ ಗೆಳೆಯ**

**ಸಾಕು, ಸುತ್ತಲು ನೋಡು ಕಣ್ದೆರೆದು ನಿಂದೂ**

**ಲೋಕದಲೆ `ವಂದೆ ಮಾತರಂ` ವೆಂಬುದೊಂದೆ ಪದ**

**ಈ ಕಿವಿಯನೊಡೆಯುತಿದೆ ಉಚ್ಚಳಿಸಿ ಬಂದೂ''.**[2]

ಪಾರತಂತ್ರ್ಯದ ಬಿಡುಗಡೆಯ ಹಂಬಲ ಉತ್ಕಟವಾಗಿ ಉಕ್ಕಿ ಹರಿದಿರುವುದನ್ನು ನೋಡಬಹುದು.

**``ನುಗ್ಗು, ನುಗ್ಗುತ ಪರರು, ಮುನ್ನುಗ್ಗುತ್ತ ಬರುತಿಹರು**

**ಬಗ್ಗಿರದೆ, ಬಾಗುವುದೆ.. ನಿನಗಾಯಿತಿಂದೂ!``**[3]

ದಾಸ್ಯದಿಂದ ಮುಕ್ತವಾಗಲು ಭಾರತೀಯತೆಯ ಸದ್ಭಾವನೆಯನ್ನು, ಪರರನ್ನು ಎದುರಿಸುವ ಕಿಚ್ಚನ್ನು ತುಂಬಬೇಕು. ಇಲ್ಲದಿದ್ದರೆ, ನಮ್ಮ ಉದಾಸೀನತೆ, ಉದಾರತೆ, ಮುಗ್ಧತೆಯನ್ನು, ಸಂಕುಚಿತ ಬುದ್ಧಿಯನ್ನು ತಿಳಿದ ಪರರು ನುಗ್ಗಿ ಬರುತ್ತಾರೆ. ಈಗಲಾದರೂ ನಿನ್ನಲ್ಲಿ ಆ ರೊಚ್ಚು ಬರದಿದ್ದರೆ, ಹಾಗೇ ಸುಮ್ಮನಿದ್ದರೆ, ಬಾಗಿದರೆ ಅದರ ಮೇಲೆ ಸವಾರಿ ಮಾಡುವುದು ಖಚಿತ. ನಮಗೆ ತಲೆಬಾಗಿದ್ದಾರೆಂದು ಹಿಂದಿರುಗುವುದಿಲ್ಲ. ಆ ದೈನ್ಯತೆಯನ್ನು ಉಪಯೋಗಿಸಿಕೊಂಡು ಮತ್ತಷ್ಟು ತುಳಿಯುವ ಸಾಹಸ ಮಾಡುತ್ತಾರೆ. ಆಮೇಲೆ ವ್ಯಥೆ ಪಟ್ಟರೆ ಯಾವುದೇ ಪ್ರಯೋಜನವಾಗುವುದಿಲ್ಲ.

``ಕಳವಾದ ಮೇಲ್ ನೀನು, ಕಳವಳಿಸಿ ಫಲವೇನು?

ಕಳದಪುದೇ ಸ್ವಾತಂತ್ರ್ಯ ಮಣಿಯು ನಿನಗಿಂದೂ!``.[4]

ಸಂಪೂರ್ಣವಾಗಿ ಆವರಿಸಿದ ಮೇಲೆ ಅರಿತರೆ ಹಿತವುಂಟಾಗುವುದಿಲ್ಲ. ಆಗ ಸ್ವಾತಂತ್ರ್ಯವೆಂಬ ಮಣಿಯು ಸಿಗುತ್ತದೆಂಬುದು ಸಲ್ಲದ ಮಾತು. ಈಗ ಮೈಮರೆಯದೆ ಎದುರಾಳಿಯ ವಿರುದ್ಧ ಮುನ್ನುಗ್ಗಬೇಕೆಂದಿದ್ದಾರೆ. ಇಲ್ಲೆಲ್ಲ ಪಂಜೆಯವರು - ಪರದೇಶಿಯರು ಇಲ್ಲಿಗೆ ಬಂದು ನಮ್ಮ ಮೇಲೆ ಸವಾರಿ ಮಾಡುತ್ತಾ, ನಮ್ಮವರನ್ನೇ ಸವಾರಿಯ ಸಾಧನವಾಗಿ ಬಳಸುತ್ತಿರುವ ಹೀನ ಸ್ಥಿತಿಯಿಂದಾಗುತ್ತಿರುವ ಮಾನಸಿಕ ಮತ್ತು ದೈಹಿಕ ಹಿಂಸೆಯ ಸ್ವರೂಪವನ್ನು ಅಭಿವ್ಯಕ್ತಿಸಿದ್ದಾರೆ.

ಸ್ವರಾಜ್ಯದಾಸೆಯನ್ನು ಪ್ರಬಲವಾಗಿ ಹೊಂದಿದ್ದ ಗೋವಿಂದ ಪೈಯವರು ತಮ್ಮ ಭಾರತ ಭಾಗ್ಯ ವಿಧಾತ ಕವನದಲ್ಲಿ

``ಭಾರತ ಭಾಗ್ಯ ವಿಧಾತಾ

ತಾ ತಾ ತಾ

ಸ್ವರಾಜ್ಯವೆಮಗೆ ದಾತಾ

ತಾ ತಾ ತಾ''.[5]

ಭಾರತ ಭಾಗ್ಯದ ನಿಧಿಯೇ ನಮಗೆ ಸ್ವರಾಜ್ಯವನ್ನು ದಾನ ಮಾಡು ಎಂದು ಗಾಂಧಿಯಲ್ಲಿ ಮೊರೆಯಿಡುವ ಪರಿಯಿದೆ. ಸ್ವಾತಂತ್ರ್ಯಕ್ಕಾಗಿ ಹೋರಾಡಿದ ಗಾಂಧಿಯವರ ವ್ಯಕ್ತಿತ್ವಕ್ಕೆ ನೀಡಿರುವ ಅಭಿವ್ಯಕ್ತಿ ಇದಾಗಿದೆ.

``ಕಲಿಸೆಮಗೆ ಸತ್ಯವೊಂದು

ಇಸ್ಲಾಮಂತೆಯೆ ಹಿಂದು

ತಾಯ್ಮೊಲೆಗಳಿವೆಂದು

ಮೊಲೆಕೊಡುವ ತಾಯೊಂದು''.

``ಸ್ವರಾಜ್ಯ ಪಿಪಾಸೆ

ಜಗಕೆ ಹಾಲಿನ ಬಾಸೆ

ಯಪ್ಪಂತೆ ಕುರುಣಿಸೆ

ಸುರಿಗು ಶಾಂತಿಯ ಸೇಸೆ''.[6]

ಸ್ವರಾಜ್ಯವೆಂಬ ಮಂತ್ರ ಹಾಲಿನ ವಾಸನೆಯನ್ನು ಸವಿದಂತೆ. ಯಾವುದೇ ಮತ, ಜಾತಿ, ಧರ್ಮಗಳ ಭೇದವಿಲ್ಲದೆ ಒಗ್ಗೂಡಿ, ಸ್ವರಾಜ್ಯವನ್ನು ಪಡೆಯಲು ನಮ್ಮವರು ಒಂದು ಸತ್ಯವನ್ನು ಅರಿಯುವಂತೆ ಮಾಡು. ಅದು ಇಸ್ಲಾಂ, ಹಿಂದೂ ಎಂಬವು ತಾಯ್ಮೊಲೆಗಳಂತೆ, ಮೊಲೆಕೊಡುವ ತಾಯಿ ಒಬ್ಬಳೇ. ಅಂತೆಯೇ ಭಾರತಾಂಬೆಯ ಮಕ್ಕಳಾದ ನಾವು ಯಾವುದೇ ಬಿಕ್ಕಟ್ಟುಗಳನ್ನು ಸೃಷ್ಟಿಸಿ ಕೊಳ್ಳದೆ, ಅಂತರವನ್ನು ತಂದು ಕೊಳ್ಳದೆ ಒಂದಾಗಬೇಕು.

``ಭಾರತಿಯ ಸ್ವಾತಂತ್ರ್ಯ ಸಾಧನೆ ನಿಜ ಮಂತ್ರ

**ಭಾರತದ ಜಯಮೂರ್ತಿ ಮನ್ಮನ ಪೂರ್ತಿ''.**[7]

ಭಾರತೀಯ ಸ್ವಾತಂತ್ರ್ಯ ಹೋರಾಟಗಾರರ ಮನದ ನಿಜಮಂತ್ರವೇ ಸ್ವಾತಂತ್ರ್ಯ ಅವರ ಮಂತ್ರ ಫಲಿಸಿತೆಂಬಂತೆ ಪರದೇಶಿಯರ ದಾಹ ಮಣಿಯಿತು. ಆದರೆ ಸ್ವದೇಶಿ ಶೋಷಕರಿಗೆ ಅವರು ಅನ್ಯಾಯ, ಮೋಸ, ವಂಚನೆ ಬುದ್ಧಿಯನ್ನು ಧಾರೆಯೆರೆದಂತೆ ಕಾಣುತ್ತಿರುವುದನ್ನು ಗೋವಿಂದ ಪೈ ಅವರು.

**``ಏನು ತೋರಿಸಿದೆಮಗೆ, ಮೇಣೇನನಿತ್ತೆ ?**

**ಕಳಕೊಂಡ ಬಿಡುಗಡೆಯ ನಮಗಿತ್ತೆ ತಂದೆ**

**ಆದರೀಗಣ ಕತೆಯ ಬಲ್ಲೆಯಾ ಮತ್ತೆ?**

**ರಾಹುವನು ತೊಲಗಿಸಿದೆ ಕೇತುವನು ತಂದೆ''.**[8]

`` ಸ್ವಾತಂತ್ರ್ಯ ಬಂದುದರಿಂದ ಏನನ್ನು ಪಡೆದಂತಾಗಲಿಲ್ಲ. ಪರದೇಶದ ಶೋಷಕರು ತೊಲಗಿ ಸ್ವದೇಶಿ ಶೋಷಕರು ನೆಲೆನಿಂತಂತಾಯಿತು. ರಾಹುವಾಗಲೀ ಕೇತುವಾಗಲೀ ಮಾಡುವ ಕೆಲಸ ಬರೀ ನುಂಗುವುದು ತಾನೇ! ಒಟ್ಟಿನಲ್ಲಿ ಅನಿಷ್ಟದಿಂದ ಈ ದೇಶ ಪಾರಾಗಲಿಲ್ಲ ಎಂಬುದು ಪೈ ಅವರ ಅನುಭವ``[9]. ಸ್ವಾತಂತ್ರ್ಯ ಬಂದುದು ಏನನ್ನು ಪಡೆದಂತಾಗಲಿಲ್ಲ ಎಂಬುದನ್ನು ಒಪ್ಪಲಾಗದು. ಶೋಷಣೆ ಎಂಬುದು ಪ್ರಾಚೀನ ಕಾಲದಿಂದಲೂ ಮನುಷ್ಯ ಪ್ರಾಣಿ ರೂಢಿಸಿಕೊಂಡು ಬಂದಿರುವ ಒಂದು ಅಸ್ತ್ರ. ಅದರ ಪ್ರಮಾಣ, ರೂಪದಲ್ಲಿ ಕಾಲದಿಂದ ಕಾಲಕ್ಕೆ ವ್ಯತ್ಯಾಸವಾಗಬಹುದು. ಬ್ರಿಟಿಷರ ದಾಸ್ಯದಿಂದ ಮುಕ್ತ ಸಮಾಜ ನಿರ್ಮಾಣವಾಗಿರುವ ಇಂತಹ ಸಮಾಜದಲ್ಲಿ ಸ್ವದೇಶೀ ಶೋಷಕರ ಅಂತರ್ಯದಲ್ಲಿ ಭಾರತೀಯತೆಯ ಹೊಸ ಚೈತನ್ಯ ಮೂಡಿದರೆ ರಾಮ ರಾಜ್ಯವಾಗುವುದರಲ್ಲಿ ಸಂದೇಹವಿಲ್ಲ. ವಿದೇಶಿಯರ ಮನಸ್ಸನ್ನೇ ಗೆದ್ದಿರುವ ಭಾರತೀಯರಿಗೆ, ಅವರ ಅಂತರಂಗವನ್ನು ಬದಲಾಯಿಸಿಕೊಳ್ಳುವ ಕಾಲ ಬರತ್ತದೆಂಬ ನಿರೀಕ್ಷೆಯನ್ನು ಇಟ್ಟುಕೊಳ್ಳುವಲ್ಲಿ ತಪ್ಪೇನಿಲ್ಲ!

ಸ್ವಾತಂತ್ರ್ಯ ಹೋರಾಟಕ್ಕೆ ವೈಚಾರಿಕವಾಗಿ ಕರೆ ನೀಡುವ, ಸರ್ವಾಧಿಕಾರ ತೊಲಗಿ, ಸಾಮಾನ್ಯ ಜನರ ಬದುಕು ಸುಧಾರಿಸಿದರೆ ದೇಶದ ಭವಿಷ್ಯ ಉಜ್ವಲವಾಗುತ್ತದೆಂದು ನಂಬಿದ್ದ ಕವಿ ಕುವೆಂಪು ಅದಕ್ಕಾಗಿ,

**``ಯುಗಯುಗದ ದಾರಿದ್ರ್ಯ ಭಾರದಿಂ ಬೆನ್‌ಬಾಗಿ**

**ಗೋಳಿಡುವ ಬಡ ಜನರೇ, ಏಳಿರೈ ಏಳಿ!**

**`ಇಂದ್ರ ಸಿಂಹಾನಕೆ ಬಂದಿಹುದು ಕೊನೆಗಾಲ;`**

**ಕಳಚಿ ಬೀಳುವುದಿಂದು ನಂದನದ ಬೇಲಿ!''**[10]

ಜನ ಸಾಮಾನ್ಯರು ತಮ್ಮ ದಾರಿದ್ರ್ಯವನ್ನು ಕಳಚಲು ಪರಂಪರೆಯಿಂದ ಬಂದಿರುವ ದಾಸ್ಯವನ್ನು ಮೆಟ್ಟಿನಿಲ್ಲಬೇಕು.

ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡುವವ ಯಾವುದೇ ಕಾರಣಕ್ಕೂ, ಎಂತಹ ಸಂದರ್ಭದಲ್ಲೂ ಹಿಂದಿರುಗಬಾರದು. ಏನೇ ಬಂದರೂ ಧೈರ್ಯದಿಂದ ಎದುರಿಸಿ ಮುನ್ನಡೆಯಬೇಕೆಂಬ ಛಲದಿಂದ

**`` ನಡೆ ಮುಂದೆ, ನಡೆಮುಂದೆ,**

**ನುಗ್ಗಿನಡೆ ಮುಂದೆ!**

**ಜಗ್ಗದೆಯೆ, ಕುಗ್ಗದೆಯೆ,**

**ಹಿಗ್ಗಿ ನಡೆ ಮುಂದೆ!``**[11]

ಯಾವುದೇ ಆಮಿಷಕ್ಕೂ ಜಗ್ಗದೆ, ಎಂತಹ ಪರಿಸ್ಥಿತಿಗಳೇ ಬಂದೆರಗಿದರೂ, ಕುಗ್ಗದೆಯೆ ಸಂತೋಷದಿಂದ, ನಾನು ಅದನ್ನು ಪಡೆದೇ ತೀರುತ್ತೇನೆಂಬ ಆತ್ಮ ವಿಶ್ವಾಸದಿಂದ ಮುನ್ನುಗ್ಗಬೇಕು. ಆಗ ಅವನ ಮನದಲ್ಲಿ

**``ಭರತ ಖಂಡದ ಹಿತವೆ**

**ನನ್ನ ಹಿತ ಎಂದು**

**ಭರತ ಮಾತೆಯ ಮತವೆ**

**ನನ್ನ ಮತ ಎಂದು,**

**ಭಾರತಾಂಬೆಯ ಸುತರೆ**

**ನನ್ನ ಸೋದರರು ಎಂದು''**[12]

ನನ್ನ ಹಿತ, ಮತವೆಲ್ಲ ಭಾರತ. ಅವಳ ಮಕ್ಕಳು ನನ್ನ ಸೋದರರು ಎಂಬ ಭಾವದಿಂದ ಮುನ್ನಡೆದರೆ ಮುಂದೆ ಸ್ವರ್ಗದ ದಾರಿ ಸಿಗುತ್ತದೆ.

**``ನುಗ್ಗು ಮುಂದಕೆ, ಧೀರ,**

**ಕಾಳೆಗದ ಕೊಲೆಗೆ!**

**ನುಗ್ಗು ಮರಣಕೆ ವೀರ,**

**ಸಗ್ಗದಾ ನೆಲೆಗೆ!``**[13]

ಯಾವುದೇ ಸತ್ಕಾರ್ಯದಲ್ಲಿ ಭಾಗವಹಿಸಲು ಹಿಂಜರಿಯಬಾರದು. ಅದರಿಂದಾಗುವ ಅನಾಹುತವನ್ನು ಲೆಕ್ಕಿಸದೆ, ಮರಣವೇ ಬಂದರೂ ಹೆದರದೆ ಮುನ್ನುಗ್ಗಬೇಕೆಂಬ ಆಕ್ರೋಶದ ಧ್ವನಿಯನ್ನು ಚಿತ್ರಿಸಿದ್ದಾರೆ.

**``ಸ್ವಾತಂತ್ರ್ಯ ಸಂಗ್ರಾಮದಲಿ ತನ್ನ ಜೀವವನು**

**ಲೆಕ್ಕಿಸದೆ ಹೋರುವನು ವೀರ ಸತ್ಯಾಗ್ರಹಿ''.**[14]

ಸತ್ಯಾಗ್ರಹಿಯಾದವನು ಸ್ವಾತಂತ್ರ್ಯ ಸಂಗ್ರಾಮದಲ್ಲಿಯೇ ಅಲ್ಲ, ಎಂತಹ ವಿಷಮ ಸ್ಥಿತಿಯಲ್ಲೂ ಕೆಡುಕಿನ ಕಡೆ ಮುಖ ಮಾಡದೆ ಸನ್ಮಾರ್ಗದಲ್ಲಿ ನಡೆದು ಸತ್ಪರಿಣಾಮಗಳನ್ನುಂಟು ಮಾಡುವವನಿಗೆ ಪುಣ್ಯದ ದಾರಿ ಸುಲಭವಾಗಿ ದಕ್ಕುತ್ತದೆ. ಅದಕ್ಕಾಗಿಯೆ,

**``ಭರತಭೂಮಿ ನನ್ನ ತಾಯಿ**

**ನನ್ನ ಪೊರೆವ ತೊಟ್ಟಿಲು;**

**ಸ್ವಾತಂತ್ರ್ಯದ ಸ್ವರ್ಗಕೇರೆ**

15
ಪುಣ್ಯದೇಣ ಮೆಟ್ಟಿಲು''.

ನಮ್ಮನ್ನು ಹೆತ್ತು, ಹೊತ್ತು, ಪೊರೆದ ತಾಯಿಯನ್ನು ಬಂಧನದಿಂದ ಬಿಡುಗಡೆಗೊಳಿಸಲು ಶ್ರಮಿಸಿದರೆ ಸ್ವರ್ಗಕ್ಕೇರಲು ಅದೇ ಪುಣ್ಯದ ಮೆಟ್ಟಿಲಾಗುತ್ತದೆ. ಮಾನವ ಪುಣ್ಯವನ್ನು ಪಡೆಯಲು ಸತ್ಕಾರ್ಯಗಳನ್ನು ಮಾಡಲು ವ್ಯರ್ಥ ಸಾಹಸ ಮಾಡುತ್ತಾ, ಸಂದರ್ಭಕ್ಕಾಗಿ ಕಾಯುತ್ತಾ ಕಾಲಹರಣ ಮಾಡುತ್ತಾನೆ. ಅದನ್ನು ಬಿಟ್ಟು ನಮಗೆ ಸಿಗುವ ಅವಕಾಶವನ್ನೇ ಬಳಸಿಕೊಂಡು ಕಷ್ಟಪಟ್ಟು ಮುಂದುವರಿದರೆ ಅದೇ ಪುಣ್ಯದ ಬಾಗಿಲಿಗೆ ದಾರಿದೀಪವಾಗುತ್ತದೆ.

ಕಷ್ಟ ಕಾರ್ಪಣ್ಯಗಳನ್ನು ಎದುರಿಸಿ ಸ್ವಾತಂತ್ರ್ಯವನ್ನು ಪಡೆದ ಮೇಲೆ ಅದನ್ನು ನಡೆಸುವ ಶಕ್ತಿ, ಯುಕ್ತಿ ಬೇಕು. ಅದನ್ನು ದಯ ಪಾಲಿಸೆಂದು ಗುರುವಿನಲ್ಲಿ ಕುವೆಂಪು ಮೊರೆಯಿಡುತ್ತಾರೆ.

**``ಓ ಗುರುವೆ, ಕೊಲ್ಲದಿರು ಸ್ವಾತಂತ್ರ್ಯವನು ಕೊಟ್ಟು;**

**ಮೊದಲು ಬೇಕೆನಗದನು ಹಿಡಿದು ನಡೆಸುವ ಶಕ್ತಿ''**

ನಮ್ಮ ಹೃದಯ ಮಂದಿರದಲ್ಲಿರುವ ಜ್ಯೋತಿಯ ಸುತ್ತ ಹರಿದಿರುವ ಕತ್ತಲೆಯನ್ನು ಸರಿಸುವ ಬಲವನ್ನು ನೀಡೆಂಬ ಪ್ರಾರ್ಥನೆಯಿದೆ.

**``ನೂರು ದೇವರನೆಲ್ಲ ನೂಕಾಚೆ ದೂರ**

**ಭಾರತಾಂಬೆಯೆ ದೇವಿ ನಮಗಿಂದು ಪೂಜಿಸುವ ಬಾರ!''**

ಮಾನವರಲ್ಲಿರುವ ಕಂದಾಚಾರ, ಮೌಢ್ಯಗಳನ್ನು ತೊರೆದು ಭಾರತಾಂಬೆಯೊಬ್ಬಳನ್ನೇ ಆರಾಧಿಸಲು ಹೇಳುತ್ತಾರೆ.

ಸ್ವಾತಂತ್ರ್ಯ ಹೋರಾಟದಲ್ಲಿ ಸಕ್ರೀಯವಾಗಿ ತೊಡಗಿಸಿ ಕೊಂಡವರನ್ನು ಬ್ರಿಟಿಷರು ಬಂಧಿಸುವುದು ವಾಡಿಕೆಯಾಗಿತ್ತು. ಅಷ್ಟೇ ಅಲ್ಲ ಪ್ರಬಲವಾದ ಪ್ರೇರಣೆಯನ್ನು ನೀಡುವಂತಹ ಕವನಗಳನ್ನು ರಚಿಸಿದರೂ ಜೈಲಿನ ರುಚಿ ಅನುಭವಿಸಬೇಕಾಗಿರುತ್ತಿತ್ತು. ಅದಕ್ಕೆ ಉತ್ತಮ ನಿದರ್ಶನವೆಂದರೆ ಬೇಂದ್ರೆಯವರು. ಇವರ `ನರಬಲಿ', `ತುತ್ತಿನ ಚೀಲ',`ಮೂವತ್ತು ಮೂರು ಕೋಟಿ' ಎಂಬ ಕವನಗಳು ಸಮಾಜದ ಸಮಸ್ಯೆಗಳ ಕ್ರೂರ ದರ್ಶನವನ್ನು ಮೂಡಿಸುವುದರಿಂದ ಕುಪಿತಗೊಂಡ ಆಂಗ್ಲರು ಬೇಂದ್ರೆಯವರನ್ನು ಸೆರೆಮನೆಗೆ ತಳ್ಳಿದರು. ಆದರೂ ಧೃತಿಗೆಡದೆ

**``ಇಗೋ ! ಹೊರಟೆವು ಬಿಡುಗಡೆಗಾಗಿ**

16
**ಬಹು ರಾರು ನಮಗಿದಿರಾಗಿ?''**

ಎಂದು ನೇರವಾಗಿ ನುಡಿದು ಹೋರಾಟಕ್ಕೆ ಸ್ಪಂದಿಸಿದರು. ರಾಷ್ಟ್ರೀಯ ಚಳವಳಿಯು ನಡೆಯುತ್ತಿದ್ದ ಕಾಲದಲ್ಲಿಯೇ ಹೀಗೆ ಗುಡುಗಿದುದು ಅವರ ಕೆಚ್ಚೆದೆಗೆ ಸಾಕ್ಷಿ. ನಾವು ಯಾರ ಬಂಧಿಗಳೂ ಅಲ್ಲ, ಪ್ರಕೃತಿ ಸಹಜವಾಗಿಯೇ ಸ್ವಚ್ಛಂದವಾಗಿ ವಿಹರಿಸುವ ಸ್ವಾತಂತ್ರ್ಯವನ್ನು ಪಡೆದಿದ್ದೇವೆ. ಆದ್ದರಿಂದ ನಾವು ಬಿಡುಗಡೆಗಾಗಿ ಹೋರಾಡಲು ಸಿದ್ಧರಾಗೋಣ-

**``ಮುಗಿlಲೊಳಗೂ ಹಕ್ಕಿಗೆ ಹಾದಿ**

**ಕಡlಲೊಳಗೂ ಮೀನಕೆ ಬೀದಿ**

ಮಲೆlಗಳೊಳೂ ಹೊಳೆಗೂ ಕೋಡಿ

ನಮlಗಷ್ಟೇ ಏಕೀಬೇಡಿ?

ಅದಕಾಗಿ lತಾಗಿlಸಾಗಿ

ಇಗೋl ಹೊರಟೆವು ಬಿಡುಗಡೆಗಾಗಿ!``[17]

ಹಕ್ಕಿ, ಮೀನು, ಹೊಳೆಗೆ ಯಾವುದೇ ನಿರ್ಬಂಧಗಳಿಲ್ಲ. ಅವು ಅವುಗಳದೇ ಸಾಮ್ರಾಜ್ಯದಲ್ಲಿ ಸ್ವತಂತ್ರವಾಗಿ ಮಿಂದೇಳುತ್ತವೆ. ಆದರೆ ಮನುಷ್ಯನಿಗೆ ಅವನೇ ಕೆಲವು ಕಟ್ಟಳೆಗಳನ್ನು ನಿರ್ಮಿಸಿಕೊಂಡಿದ್ದಾನೆ. ಅಷ್ಟೇ ಸಾಲದೆಂಬಂತೆ ಮತ್ತೊಬ್ಬರು ತೊಡಿಸಿರುವ ದಾಸ್ಯದ ಬೇಡಿಯನ್ನು ಕಳಚಿ ಬಿಡುಗಡೆಗಾಗಿ ಹೊರಡಬೇಕೆಂಬ ಆಶಯವನ್ನು ಹೊಂದಿದ್ದರು.

ಸ್ವಾತಂತ್ರ್ಯ ಆಂದೋಲನದಲ್ಲಿ ಭಾಗವಹಿಸಿದವರಿಗೆ ಕೆಲವೊಮ್ಮೆ ಸೆರೆಮನೆವಾಸವನ್ನು ಅನುಭವಿಸುವ ವಾತಾವರಣ ಬರುತ್ತಿತ್ತು. ಅದರ ಕಹಿ ಅನುಭವಗಳನ್ನು ಅನುಭಿಸಿದ ಕವಿಗೆ ಸೆರೆಮನೆಯಲ್ಲಿದ್ದ ಅಹಿಂಸಾವ್ರತದ ಕರುಣ ತಪಸ್ವಿಯೊಬ್ಬರು ನಾಲ್ಕಾರು ತಿಂಗಳು ಪಟ್ಟಯಾತನೆಯಿಂದ ಭೀತನಾಗಿ ದಾರಿ ತೋರದೆ ತನ್ನಷ್ಟಕ್ಕೇ ತಾನೇ ನುಡಿಗೊಡುವುದನ್ನು` ತರುಣ ತಪಸ್ವಿನಿ' ಕವಿತೆಯಲ್ಲಿ ಅಭಿವ್ಯಕ್ತಿ ನೀಡಿದ್ದಾನೆ.

``ಬಡಕ ದೇಹದ ಬುಡಕೆ ಒಡಕ ಮನಸಿಹುದು

ಕುಡುಕ ಬುದ್ಧಿಯ ಮುಂದೆ ಕೆಡುಕು ಕನಸಿಹುದು''

``ಉಧೊ! ಉಧೋ! ಸೊಬಗು ಸೌಭಾಗ್ಯ ಕಳೆಯೇ

ಉಧೊ! ಉಧೋ! ಕಪ್ಪು ಕಲೆಯನ್ನು ಕಳೆಯೇ''.[18]

ನಿದ್ದೆಯಿಂದ ಎಚ್ಚೆತ್ತು ತನ್ನ ಮತ್ತು ರಾಷ್ಟ್ರದ ಭವಿಷ್ಯಕ್ಕೆ ಅಗತ್ಯವಾದ ವಾತಾವರಣ ಬೇಕೆಂಬ ಕನಸು ನನಸಾಗಲು ಹಂಬಲಿಸುವ ಭಾವವಿದೆ.

`ನರಬಲಿ' ಕವನವನ್ನು ಸಾಮ್ರಾಜ್ಯ ಶಾಹಿಯ ವಿರುದ್ಧ ಸಿಡಿದೇಳುವಂತೆ ರಚಿಸಿದ್ದಾರೆ. ಸಾಮ್ರಾಜ್ಯಶಾಹಿಗಳನ್ನು ಓಡಿಸಲು ಯುದ್ಧ ಮಾಡಲು ಹಿಂಜರಿಯಬಾರದು.

`` ಬಲವೆಂಬುದು ಇದು ಬೆವರಿನ ಬಳ್ಳಿ

ಕಾಳಗವೆಂಬುದು ನೆತ್ತರ ಹೂವು

ಬಿಡುಗಡೆಯೆಂಬುದು ಸಾವಿನ ಹಣ್ಣು''.[19]

`ಯುದ್ಧ ಬಂತು ಮನೆಯವರೆಗೆ' ಎಂಬ ಕವನದಲ್ಲಿ ದೇಶೀಯರಲ್ಲಿರುವ ಭಿನ್ನತೆಯನ್ನು ಮರೆತು ತಾಯ್ನಾಡಿಗಾಗಿ ದುಡಿಯಬೇಕು. ಸ್ವಾತಂತ್ರ್ಯವನ್ನು ಪಡದೇ ತೀರಬೇಕೆಂದು ಪಣತೊಟ್ಟು ಹೋರಾಟುತ್ತಿರುವ ಸನ್ನದ್ಧ ಕಾಲ ಬಂದಿದೆ ಎಂಬುದನ್ನು ಸೂಚಿತವಾಗಿ ಹೇಳಿದ್ದಾರೆ.

`ಸ್ವಾತಂತ್ರ್ಯದ ವರ್ಧಂತಿ',`ನವಯುಗಾರಂಭ' ಎಂಬ ಕವನಗಳು ಸ್ವಾತಂತ್ರ್ಯ ನಂತರ ರಚಿತವಾದ ಸ್ವಾತಂತ್ರ್ಯವನ್ನು

ಕುರಿತವುಗಳಾಗಿವೆ. ಸ್ವಾತಂತ್ರ್ಯವನ್ನು ಪಡೆಯಲು ಕಂಡ ಕನಸು ನನಸಾದರೂ ಸಾರ್ಥಕವಾಗದೆ ಕಸವಾಗಿ ಬಿಟ್ಟಿದೆ ಎಂಬ ದುಃಖದ ಮಿಡಿತವೇ `ಇದು ಸ್ವಾತಂತ್ರ್ಯವೋ?' ಕವಿತೆ.

ವಿವಿಧ ರೀತಿ, ನೀತಿಗಳ ಜನರ ಜಗತ್ತು ಒಂದೇ, ಅವೆಲ್ಲವೂ ಬೇರೆ ಬೇರೆಯಂತೆ ಕಂಡರೂ ಮೂಲದಲ್ಲಿ ಒಂದೇ ಎಂಬುದನ್ನು, ದಾಸ್ಯದಲ್ಲಿ ತೊಳಲುತ್ತಿದ್ದ ಭಾರತೀಯರಿಗೆಳ ಮೂಲಕ ಜಾಗೃತಿಯನ್ನುಂಟು ಮಾಡಿದವರು ಕಯ್ಯಾರ ಕಿಞ್ಞಣ್ಣರೈರವರು.

``ಎನ್ನ ಜಾತಿ ಮನುಷ್ಯ ಜಾತಿ

ಒಕ್ಕಟ್ಟಿನಲ್ಲಿ ಬಾಳುವುದೇ

ಬೇಕೆನಗೆ-ಬೇರೆಯಿಲ್ಲ''

`` ನವ ಭಾವ ನವಜೀವ ನವಶಕ್ತಿ ತುಂಬಿಸುವ ಹಾಡೊಮ್ಮೆ ಹಾಡಬೇಕು

ಜಾತಿ ಕುಲ ಮತ ಧರ್ಮ ಪಾಶಗಳ ಕಡಿದೊಗೆದು ಎದೆ ಹಿಗ್ಗಿ ಹಾಡಬೇಕು''.[20]

ಜಾತಿ ಬೇಧವನ್ನು ಮರೆತು ಒಗ್ಗಟ್ಟಿನಿಂದ ಬಾಳುವುದಕ್ಕಿಂತ ಬೇರೇನೂ ಬೇಕಿಲ್ಲ. ಜಾತಿ, ಕುಲ, ಮತ, ಧರ್ಮ, ಪಾಶಗಳನ್ನು ತೊರೆದು ಹೊಸ ಭಾವ, ಜೀವ, ಶಕ್ತಿಯನ್ನು ಪಡೆದು ಹುರುಪಿನಿಂದ ಬಾಳಬೇಕೆಂಬುದು ಅವರ ಆಶಯ.

ನವೋದಯ ಕಾವ್ಯದ ಕೊನೆಯ ಕೊಂಡಿಯಂತಿದ್ದ ಗೋಪಾಲಕೃಷ್ಣ ಅಡಿಗರ `ಭಾವ ತರಂಗ`,`ಕಟ್ಟುವೆವು ನಾವು' ಎಂಬ ಎರಡು ಕವನ ಸಂಕಲಗಳು ನವೋದಯ ಕಾವ್ಯದ ಲಕ್ಷಣಗಳ ಹಿನ್ನಲೆಯಲ್ಲಿಯೇ ರೂಪಿತವಾಗಿವೆ. ಎಲ್ಲಿಂದಲೋ ಬಂದವರು ಆಳುವಂಥ ಸಂದರ್ಭವನ್ನು ನೆನೆದು, ಆ ವಿದೇಶೀ ಸಂಸ್ಕೃತಿಗಿಂತ ಭಿನ್ನವಾದ ನಮ್ಮ ಸಂಸ್ಕೃತಿಯ ಶ್ರೇಷ್ಠತೆಯನ್ನು ಮರೆಯುವಂತೆ ಮಾಡುವ ಚೈತನ್ಯ ಭಾರತೀಯರಿಗಿದೆ. ಆ ಸಂದರ್ಭ ಈಗ ಬಂದಿದೆ. ಹಾಗಾಗಿ,

``ಕಟ್ಟುವೆವು ನಾವು ಹೊಸ ನಾಡೊಂದನು, ರಸದ

ಬೀಡೊಂದನು.

ಹೊಸನೆತ್ತರುಕ್ಕುಕ್ಕಿ ಆರಿ ಹೋಗುವ ಮುನ್ನ,

ಹರೆಯದೀ ಮಾಂತ್ರಿಕನ ಮಾಟ ಮಸುಳುವ ಮುನ್ನ,

ಉತ್ಸಾಹ ಸಾಹಸದ ಉತ್ತುಂಗ ವೀಚಿಗಳ

ಈ ಕ್ಷುಬ್ಧ ಸಾಗರವು ಬತ್ತಿ ಹೋಗುವ ಮುನ್ನ

ಕಟ್ಟುವೆವು ನಾವು ಹೊಸ ನಾಡೊಂದನು!``[21]

ವಸಾಹತುಶಾಹಿ ಸಂಸ್ಕೃತಿಯಿಂದ ಭಾರತೀಯ ಸಂಸ್ಕೃತಿಗೆ ಆಗಿರುವ ಅವಮಾನ ಕಲೆ ಅಂಟುವ ಮುನ್ನ ಎಚ್ಚೆತ್ತು, ಹೊಸನಾಡಿನ ಸೃಷ್ಟಿಗೆ ಮುಂದಾಗಬೇಕು. ಆ ಸಾಮರ್ಥ್ಯವಿರುವುದನ್ನು ತೋರಿಸಿದ್ದಾರೆ. ಇದುವರೆವಿಗೂ ದಾಸ್ಯದಲ್ಲಿದ್ದವರಿಗೆ, ದೇಶದ ಸ್ವಾತಂತ್ರ್ಯವನ್ನು ಕಂಡಾಗ ಪ್ರತಿಯೊಬ್ಬ ಭಾರತೀಯನಿಗೂ ಧನ್ಯತೆಯನ್ನು ಅನುಭವಿಸಿದಂತಾಗುತ್ತದೆ. ಹಾಗೆಯೇ ಕವಿ ಹೃದಯವೂ ತಾವು ಬದುಕಿದ್ದಾಗಲೆ ಸ್ವಾತಂತ್ರ್ಯ ಬಂದುದನ್ನು ಕಂಡು ಆನಂದಪಟ್ಟಿತು. ಅದನ್ನು ಅವರು `ಸ್ವಾತಂತ್ರ್ಯ ಗೀತ' ಕವಿತೆಯಲ್ಲಿ ಕಾಣಿಸಿದ್ದಾರೆ. ಆ ಆನಂದದ ಆ ಕ್ಷಣ, ಆ ದಿನವನ್ನು ನೆನೆದು ನಾವು ಧನ್ಯರಾಗೋಣ.

## ಅಡಿ ಟಿಪ್ಪಣಿಗಳು

1.ಪಂಜೆ ಮಂಗೇಶರಾಯರು;ತೂಕಡಿಕೆಯನು ಕಳೆ ಕವಿತೆ

2.ಅದೇ..

3. ಅದೇ...

4. ಅದೇ..

5. ಗೋವಿಂದಪೈ;ಗಿಳಿವಿಂಡು;ಪುಟ-34

6.ಅದೇ.. ಪುಟ-35

7.ಗೋವಿಂದಪೈ;ಹೃದಯರಂಗ;ಪುಟ-6

8.ಅದೇ... ಪುಟ--49

9.ಜಿ.ಎಸ್.ಎಸ್.;ಸಮಗ್ರಕಾವ್ಯ;ಸಂಪುಟ-2; ಪುಟ-250

10.ಕುವೆಂಪು ಸಮಗ್ರಕಾವ್ಯ;ಸಂಪುಟ-1; ಪುಟ-373

11. ಅದೇ... ಪುಟ-111

12. ಅದೇ.. ಪುಟ-112

13.ಅದೇ....

14. ಅದೇ.. ಪುಟ-126

15. ಅದೇ.... ಪುಟ-378

16.ವಾಮನಬೇಂದ್ರೆ; ಅಂಬಿಕಾತನಯದತ್ತಸಮಗ್ರ ಕಾವ್ಯ;ಸಂಪುಟ-2;ಪುಟ-332

17.ಅದೇ.

18. ಅದೇ... ಪುಟ-335

19.ಅದೇ.... ಪುಟ-340

20.ಪು.ತಿ.ನರಸಿಂಹಾಚಾರ್;ಸುವರ್ಣ ಸಂಪುಟ;ಪುಟ-299

21.ಗೋಪಾಲ ಕೃಷ್ಣ ಅಡಿಗ;ಕಟ್ಟುವೆವು ನಾವು; ಪುಟ-09

## ೩. ಹೋರಾಟಗಾರರು

ಶತ ಶತಮಾನಗಳಿಂದ ತುಳಿಯುತ್ತಾ, ಮಾನವೀಯತೆಯನ್ನು ಮರೆತು, ಅಹಂಕಾರ, ದರ್ಪಗಳನ್ನು ಪ್ರದರ್ಶಿಸುತ್ತಾ ಬಂದಿದ್ದ ಬ್ರಿಟಿಷರ ಸೊಕ್ಕನ್ನು ಮುರಿದು ಅವರ ದೌರ್ಜನ್ಯಕ್ಕೆ ಕಡಿವಾಣ ಹಾಕಿ, ಮೆಟ್ಟಿನಿಂತು ಅವರನ್ನು ಬಗ್ಗುಬಡಿಯಲು ಹೋರಾಟಗಾರರ ದಂಡೇ ಬರಬೇಕಾಯಿತು. ಭಾರತೀಯ ಹೋರಾಟಗಾರರು ಅನುಸರಿಸಿದ ಮಾರ್ಗಗಳು ಹಲವು. ಬ್ರಿಟಿಷರ ವಿರುದ್ಧ ನಿಂತು ಯುದ್ಧ ಮಾಡಬೇಕೆನ್ನುವುದು ಒಂದೆಡೆಯಾದರೆ, ಅವರ ವ್ಯಾಪಾರ-ವ್ಯವಹಾರ, ಆಡಳಿತಕ್ಕೆ ಅಡ್ಡಿಪಡಿಸುವುದು ಮತ್ತೊಂದೆಡೆ. ಇದರ ನಡುವೆ ಬ್ರಿಟಿಷ್ ಅಧಿಕಾರಿಗಳ ಚಾಣಾಕ್ಷತನ, ರಾಜತಾಂತ್ರಿಕ ನಿಪುಣತೆ ಭಾರತೀಯರನ್ನು ಸದೆಬಡಿಯಲು ಹವಣಿಸುತ್ತಿತ್ತು. ಇನ್ನೊಂದೆಡೆ ಶಾಂತಿ ಮಾರ್ಗದ ಮೂಲಕ ಸತ್ಯ, ಅಹಿಂಸೆ, ನ್ಯಾಯ, ಮಾನವೀಯತೆ, ಉಪವಾಸ, ಶಾಂತಿ ಎಂಬ ನುಡಿಗಳನ್ನು ಜಪಿಸುತ್ತಾ ನಮಗೆ ಸ್ವಾತಂತ್ರ್ಯ ಕೊಡಿ ಎಂದು ಬೇಡುವ ದಯನೀಯತೆ. ಈ ಎಲ್ಲ ಪ್ರಯತ್ನಗಳ ಫಲವಾಗಿ ಸ್ವಾತಂತ್ರ್ಯವನ್ನು ಪಡೆದೆವು. ಈ ಅಂಶಗಳು ನವೋದಯ ಕಾವ್ಯಕ್ಕೆ ವಸ್ತುವಾದವು. ಜೊತೆಗೆ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ ಹೋರಾಟಗಾರರ ಆದರ್ಶ, ಧೈರ್ಯ, ಸಾಹಸಗಳನ್ನು ಕುರಿತು ಬರೆಯತೊಡಗಿದರು. ಅವರ ಆ ಗುಣಗಳು ಎಲ್ಲರಿಗೂ ಮಾದರಿಯಾಗಬೇಕೆಂಬ ಆಶಯ ಇಂತಹ ಸಂಗ್ರಾಮದಲ್ಲಿ ಭಾಗವಹಿಸುವಂತೆ ಪ್ರೇರೇಪಿಸಲು ಹಾಗೂ ಅವರನ್ನು ತಮ್ಮ ಕಾವ್ಯದಲ್ಲಿ ತರುವ ಮೂಲಕ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪರೋಕ್ಷವಾಗಿ ಅಲ್ಪ ಸೇವೆಯನ್ನು ಸಲ್ಲಿಸಿದೆನೆಂಬ ಆತ್ಮತೃಪ್ತಿಯಿಂದಲೋ ಈ ಕಾರ್ಯ ಸುಲಲಿತವಾಗಿ ಸಾಗಿದೆ.

ಮಹಾತ್ಮಗಾಂಧಿ, ಭಗತ್‌ಸಿಂಗ್, ಲಾಲ್ ಬಹದ್ದೂರ್ ಶಾಸ್ತ್ರಿ, ಜವಹರ್‌ಲಾಲ್ ನೆಹರು, ಅರವಿಂದಘೋಷ್, ಸ್ವಾಮಿ ವಿವೇಕಾನಂದ ಮೊದಲಾದವರು ಒಂದಲ್ಲ ಒಂದು ರೀತಿಯಲ್ಲಿ ದೇಶಕ್ಕಾಗಿ ದುಡಿದಿದ್ದಾರೆ. ಸಮಾಜದಲ್ಲಿ ಕೆಲವು ಅಗತ್ಯವಾಗಿ ಆಗಬೇಕಾಗಿದ್ದ ಬದಲಾವಣೆಗಳನ್ನು ಮಾಡಿದ್ದಾರೆ. ಅವರುಹಾಕಿಕೊಟ್ಟ ಆ ಮಾದರಿಗಳು ಇಂದಿಗೂ ಆದರಣೀಯವಾಗಿವೆ. ಇವರಲ್ಲಿ ಮಹಾತ್ಮ ಗಾಂಧಿಯವರ ಸತ್ಯ, ಅಹಿಂಸೆ, ಉಪವಾಸ, ಆತ್ಮವಿಶ್ವಾಸದ ಗುಣಗಾನ ನವೋದಯ ಕಾವ್ಯದಲ್ಲಿ ಹರಿದಾಡಿದೆ. ಅವರ ವ್ಯಕ್ತಿತ್ವದ ಅವಲೋಕನವೇ ಕಾವ್ಯದ ತುಂಬೆಲ್ಲಾ ಮಡುಗಟ್ಟಿನಿಂತಿದೆ. ಸ್ವಾತಂತ್ರ್ಯ ವೀರರು ಹುತಾತ್ಮರಾದರೂ, ಅವರ ನೆನಪಿನಿಂದಾಗಿ, ಜೀವನದ ಆದರ್ಶಗಳು ಉಜ್ವಲವಾಗಬೇಕು. ವೈರ, ದ್ವೇಷ ವಿಜೃಂಭಿಸಬಾರದು ಎನ್ನುವುದನ್ನು ದ.ರಾ.ಬೇಂದ್ರೆಯವರು-

``ಜೀವನವೋ ಕುರುಕ್ಷೇತ್ರ

ಮುಕ್ತ ಧರ್ಮ ಸದಾಕ್ಷೇತ್ರ

ದೇವ ಜೀವನಕ್ಕೆ ಪಾತ್ರ

ಇದು ಜೀವನ ಕರುಣ ನೇತ್ರ

ವೈರಬೇಡ, ಸ್ವೈರ ಬೇಡ, ವಿರಸ ವಿಷವ ತೊಳೆಯುವಾ

ವೀರ ಧರ್ಮಸಾರ ಅಮೃತವೆಂದು ಬೆಳೆಯುವಾ

ವೀರವನ್ನು ನೆನೆದು ನೆನೆದು ವೀರರಾಗಿಯುಳಿಯುವಾ''.[1]

ಸ್ವಾತಂತ್ರ್ಯ ಹೋರಾಟದಲ್ಲಿ ಹೋರಾಡಿ ಹುತಾತ್ಮರಾದವರ ಆದರ್ಶಗಳನ್ನು ಪಾಲಿಸಲು ಕರೆ ಕೊಡುತ್ತಾರೆ. ಜೀವನವೆಂಬ

ಯುದ್ಧಭೂಮಿಯಲ್ಲಿ ಧರ್ಮದಿಂದ ನಡೆದುಕೊಂಡು ದೇವರ ಕರುಣೆಗೆ ಪಾತ್ರರಾಗಲು, ಮನದಲ್ಲಿರುವ ಕಲ್ಮಶಗಳನ್ನು ತೊಳೆದು, ವೀರಧರ್ಮಸಾರದ ಅಮೃತವನ್ನು ತುಂಬಿ, ಆ ವೀರತ್ವವನ್ನು ನೆನೆದು ವೀರರಾಗಿ ಬಾಳಬೇಕೆಂದು ಹಾರೈಸುತ್ತಾರೆ.

ಗಾಂಧಿ ಎಂತಹ ವಿಷಮ ಪರಿಸ್ಥಿತಿಗಳನ್ನು ಮೆಟ್ಟಿ ನಿಲ್ಲುತ್ತಿದ್ದ ಮಹಾಪುರುಷ. ಇವರು ಹೋರಾಟದಲ್ಲಿ ನಿಂತರೆಂದರೆ-

``ಈ ಮಹಾ ಸ್ವಾತಂತ್ರ್ಯ ರಣಯಾಗ ಧೂಮದಲಿ

ಶ್ವೇತಾಗ್ನಿ ಜ್ವಾಲೆಯೊಂದುರಿಯುತಿದೆ;ನಿಶ್ಚಲಂ

ರಂಜಿಸುತ್ತಿದೆ-ಶಾಂತಿಯಲಿ ಹಿಮ ಮಹಾಚಲಂ

ರಾರಾಜಿಪಂತೆ ನೀಲಿಮ ನಭೋಧಾಮದಲಿ. "[2]

ಇಲ್ಲಿ ಕುವೆಂಪು ಅವರು ಸ್ವಾತಂತ್ರ್ಯ ಸಂಗ್ರಾಮದಲ್ಲಿ ಗಾಂಧಿಯವರ ಹೋರಾಟವನ್ನು ಯಾಗಕ್ಕೆ ಹೋಲಿಸಿದ್ದಾರೆ. ಯಾಗದಲ್ಲಿನ ಅಗ್ನಿ ಯಾವುದೇ ವಸ್ತುವನ್ನು ತಿನ್ನುವಂತೆ ಗಾಂಧಿ ಎಷ್ಟೇ ವೈರುಧ್ಯಗಳು, ನೋವು, ಹತಾಶೆ, ಸಂಕಷ್ಟ, ನಿರಾಸೆಗಳು ಎದುರಾದರೂ ಅದನ್ನೆಲ್ಲಾ ತಾವೇ ನುಂಗಿದರು.

``ಓ ಮಹಾತ್ಮನೆ, ನಿನ್ನ ಸಾನ್ನಿಧ್ಯ ತೀರ್ಥದಲಿ

ಮಾನವನ ಮೋಹಮದ ಮಾತ್ಸರ್ಯಗಳು ಮಿಂದು

ಪ್ರೇಮದಿ ಪುನೀತವಾಗಿಹವು".[3]

ಮಹಾತ್ಮರಿಗೆ ಜನ್ಮಕೊಟ್ಟ ನಾಡಿನಲ್ಲಿ ಹುಟ್ಟಿ, ಅವರ ಬಳಿ ಬೆಳೆದರೂ ಮೋಹ, ಮದ, ಮಾತ್ಸರ್ಯಗಳು ಸಂಪೂರ್ಣವಾಗಿ ಮಾನವನ ಮನದಿಂದ ದೂರಾಗಲಿಲ್ಲ. ಅವು ಈಗ ಹೊಸ ರೂಪವನ್ನು ಪಡೆದಿವೆ ಎಂಬುದನ್ನು ಸೂಚಿಸಿದ್ದಾರೆ.

ರಾಷ್ಟ್ರಕ್ಕಾಗಿ ತನುಮನವನ್ನು ಅರ್ಪಿಸಿದ ಮಹಾತ್ಮನ ದರ್ಶನವೇ ಭಾಗ್ಯ. ಅವನ ದರ್ಶನಕ್ಕಾಗಿ ಹಾತೊರೆಯುತ್ತಿದ್ದವರ ಮನದ ಭಾವವನ್ನು ಮಾಸ್ತಿಯವರು-

`` ಇಂದು ನಮ್ಮ ಮಹಾತ್ಮ

ಗಾಂಧಿಯನು ನೋಡಲಿಕೆ

ಬಂದೆವಿಲ್ಲಿಗೆ ಲೋಕ

ಬಾಂಧವನ ದರುಶನಕೆ".[4]

ಗಾಂಧಿಯವರನ್ನು ಕಂಡವರಿಗೆ ಅವರ ವ್ಯಕ್ತಿತ್ವದ ಅರಿವಾದುದು ಹೀಗೆ-

``ಎಳೆಯ ಮಗುವಿನ ಮೊಗದ

ನಗೆಯಿಹುದು ಮೊಗದೆ;

ಇಳೆಯರಸರಿಗೆ ಬರದ

ಬಗೆಯ ಗಾಂಭೀರ್ಯ".[5]

ಏನೂ ಅರಿಯದ ಮುಗ್ಧ ಮಗುವಿನ ನಗುವಿನ ರೀತಿ ನಿಷ್ಕಲ್ಮಶವಾಗಿ ಕಂಡಿದೆ. ಇವರಲ್ಲಿನ ಗಾಂಭೀರ್ಯ ಈ ಭೂಮಿಯ ಅರಸರಿಗೆ ಬರಲಿಲ್ಲ. ಅವರಿಗೆ ಈ ಭೂಮಿಗೆ ಅಧಿಪತಿ ಎಂಬುದಿರುತ್ತದೆ. ಆದರೆ ಜಗತ್ತನ್ನೇ ಗೆದ್ದ ಈ ಮಹಾತ್ಮನಿಗೆ ಆ ಭಾವದ ಲವಲೇಶವೂ ಇಲ್ಲ ಎನ್ನುವುದನ್ನು, ಕೊನೆಗೆ ಅವರ ದರ್ಶನ ಪಡೆದು ಧನ್ಯರಾದೆವೆಂದು ಹೇಳುತ್ತಾರೆ.

ಗೋವಿಂದ ಪೈಯವರು ಗಾಂಧಿಯನ್ನು ` ಭಾರತ ಭಾಗ್ಯ ವಿಧಾತಾ' ಎನ್ನುತ್ತಾರೆ. ಗಾಂಧಿಯವರು-

**``ಅನಾಥರ ನಾಥಾ**

**ಪತಿತರ ನೇತಾ**

**ಮದಾಂಧರ ಜೇತಾ**

**ಪರತಂತ್ರರ ತ್ರಾತಾ''.**[6]

ಅನಾಥರಿಗೆ ಒಡೆಯ, ಪರಾಜಿತರಿಗೆ , ಸೋತವರಿಗೆ, ಮಾರ್ಗದರ್ಶಕ, ಪರರ ಅಧೀನದಲ್ಲಿರುವವರನ್ನು ಕಾಪಾಡುವವನು, ಇಲ್ಲೆಲ್ಲ ಗಾಂಧಿಯನ್ನು ನಾಯಕನನ್ನಾಗಿ ಮಾಡಲಾಗಿದೆ. ಅತಂತ್ರ ಸ್ಥಿತಿಯಲ್ಲಿರುವವರ ನೇತಾರನಾಗಿ ಕಂಡುಬರುವುದನ್ನು ಹೇಳಲಾಗಿದೆ. ಇಂತಹ ಮಹಾತ್ಮನಿಗೆ ಸಮನಾದವನು ಯಾರೂ ಇಲ್ಲವೆನ್ನುವುದನ್ನು , ನಿನಗೆ ನೀನೇ ಸರಿಸಾಟಿಯೆಂದು-

**``ನಿನ್ನಂತಹ ಗುಣವಂತನು, ನಿನ್ನಂತಹ ಘನವಂತನು**

**ನಿನ್ನಂತಹ ಸಿರಿವಂತನು ನೀನೊಬ್ಬನೇ ತಂದೆ''.**[7]

ಎಂದು ಕಯ್ಯಾರ ಕಿಞ್ಞಣ್ಣರೈ ಹೇಳುತ್ತಾರೆ.

ವ್ಯಕ್ತಿತ್ವದಲ್ಲಿ ಹಿಮಾಲಯದೆತ್ತರದಲ್ಲಿ ನಿಲ್ಲುವ ಗಾಂಧಿಯವರನ್ನು ಕುವೆಂಪು-

**`` ಮರೆವುದೆಂತಾ ನಮ್ಮ ಸ್ವಾತಂತ್ರ್ಯ ಶಿಲ್ಪಿಯಂ**

**ದಿವ್ಯದಿನದೀ ಶುಭ ಮಹೂರ್ತದಲ್ಲಿ?**

**ಮರೆವುದೆಂತಯ್ ಭುವನ ಗೌರವ ಮಹಾತ್ಮನಂ**

**ಸ್ವಾತಂತ್ರ್ಯದೀ ಸುಪ್ರಭಾತದಲ್ಲಿ?''**

**``ಸೃಷ್ಟಿಕರ್ತಂ ಸೃಷ್ಟಿ ತಾನಾಗಿ ಸೃಷ್ಟಿಯೊಳೆ**

**ದುಡಿಯುತಿರ್ಪುದಕವನೆ ದಿವ್ಯ ಸಾಕ್ಷಿ!**

**ಗಾಂಧಿಯೆಂಬಾ ಪೆಸರ ನಾಂದಿಯಾಗಲಿ ನಮ್ಮ**

**ಸ್ವಾತಂತ್ರ್ಯ ಸಂಭ್ರಮಕೆ''.**[8]

ಸ್ವಾತಂತ್ರ್ಯ ದಿನದ ಸಂಭ್ರಮಾಚರಣೆಯಲ್ಲಿ ಈ ರಾಷ್ಟ್ರ ಪ್ರೇಮಿಯನ್ನು ಗೌರವದಿಂದ ವಂದಿಸಬೇಕು. ಗಾಂಧಿಯೆಂಬ ಹೆಸರಿನಿಂದಲೇ, ಅವರ ನೆನಪಿನಿಂದಲೇ ದಿನ ಆರಂಭಗೊಂಡರೆ ಆ ದಿನದ ಸಂಭ್ರಮಕ್ಕೆ ಅದೇ ಸಾಕ್ಷಿಯಾಗುತ್ತದೆ.

ಕ್ರಿ.ಶ.೧೯೨೪ ರಲ್ಲಿ ಗಾಂಧಿಯವರು ಧಿಲ್ಲಿಯಲ್ಲಿ ಮಾಡಿದ ೨೧ ದಿನಗಳ ಉಪವಾಸವನ್ನು ಕುರಿತು ಗೋವಿಂದ ಪೈ ಅವರು

`ಮಹಾತ್ಮರ ಉಪವಾಸ' ಎಂಬ ಕವಿತೆಯನ್ನು ರಚಿಸಿದ್ದಾರೆ.

**``ಗುರುವೆ ಇಪ್ಪತ್ತೊಂದು ದಿನದುಪೋಷ್ಯವ ನೋಂತು**

**ನೀ ಧಿಲ್ಲಿಯಿಂ ಚೆಲ್ಲಿದೀ ಪ್ರೇಮಬೀಜಂ**

**ಭಾರತದ ಭಾಗ್ಯಲತೆಯಾಗಿ ಮಡಲಿಡದೆಂತು?**

**ಬೆಳಸದೆಂತಮರ ಸೌಂದರ್ಯಮಿದು ಸಾಜಂ?''**[9]

ಬ್ರಿಟಿಷರ ವಿರುದ್ಧ ಹೋರಾಡಲು ಉಪವಾಸವನ್ನು ದಿವ್ಯೌಷಧವಾಗಿ ಬಳಸುತ್ತಿದ್ದರು. ಭಾರತದ ಭಾಗ್ಯಲತೆಯಾಗಿ ಉಪವಾಸ ವ್ಯಾಪಕವಾಗಿ ಬೆಳೆದು ಅಮರವಾಯಿತು.

ಹೀಗೆ ಸ್ವಾತಂತ್ರ್ಯಕ್ಕಾಗಿ ಕಾಯವಾಚಾ ಮನಸಾ ದುಡಿದ ಧೀಮಂತ ಗಾಂಧಿಯನ್ನು ನಾಥೂರಾಮ್ ಗೊಡ್ಸೆ ಗುಂಡಿಟ್ಟು ಕೊಂದ. ಆ ಮಹಾತ್ಮನ ರಕ್ತ ಭೂಮಿಗೆ ಬಿದ್ದಾಗ ಭೂಮಾತೆ ಎಷ್ಟು ನೊಂದು , ಕಳವಳಕ್ಕೊಳಗಾಗಿರಬೇಕು, ಸುತ್ತಲಿನ ಪರಿಸರದ ಮರುಕವೆಷ್ಟಿರಬಹುದು ಎಂಬುದನ್ನು ಊಹಿಸಲು ಅಸಾಧ್ಯ.

ಹೀಗೆ ಹುತಾತ್ಮನಾದ ಗಾಂಧಿಯವರನ್ನು ಕುರಿತು ದ.ರಾ.ಬೇಂದ್ರೆಯುರು`ಬಾಪೂಜಿ-ಪೂಜಿ',`ಗಾಂಧೀವಾದಿ',` ಕೇಳಿರೊಂದು ಸೋಜಿಗ`,`ಶ್ರದ್ಧಾಂಜಲಿ`,`ಅಮರ ಮರಣ',`ವೃದ್ಧಗಾಂಧಿ', `ಮಹಾತ್ಮ',` ಧ್ರುವತಾರೆ',` ಗಾಂಧಿಸತ್ಯ',`ಪೂತಾತ್ಮ-ಹೂತಾತ್ಮ ಹುತಾತ್ಮ-ಮಹಾತ್ಮ',`ಜಯಂತಿ',`ಗಾಂಧಿ ಭಸ್ಮ'ಇನ್ನೂ ಮೊದಲಾದ ಕವಿತೆಗಳನ್ನು ರಚಿಸುವುದರ ಮೂಲಕ ಅವರಿಗೆ ಕಾವ್ಯದಲ್ಲಿ ವಿಶಿಷ್ಟ ಸ್ಥಾನ ನೀಡಿದ್ದಾರೆ.

**`ಅಳುವುದಷ್ಟೆ ಅಳಿದೀತು, ಬದುಕುವದು ಪ್ರಾಣಜಾತಸತ್ಯ**

**ರೂಪ ಕಳಿವುಂಟು ಆಸ್ವರೂಪ ಆಕಾಶಕ್ಕಿಂತ ನಿತ್ಯ''**

**``ಏನಾದರೂ ಹೇಗೊ ತಿಂದು ಬದುಕುವದೆ ಬಹಳರಾಸೆ,**

**ಸತ್ಯದನ್ನವನೆ ಉಂಡುಬಾಳಿ ಎನ್ನುವುದು ಪುರುಷ ಭಾಷೆ**

**ಅಮರವಾವುದೆಂಬುವದದೇನು ಅವಿವೇಕಿತಾನು ಬಲ್ಲ?**

**ದೇಹಧರ್ಮಕೋ ಸಾವು ಉಂಟು, ಆತ್ಮಿಕಗೆ ಸಾವು ಇಲ್ಲ''.**[10]

ಸತ್ಯವನ್ನೇ ನುಡಿದು, ನ್ಯಾಯ ಮಾರ್ಗದಲ್ಲಿ ಬಾಳಿ ಹುತಾತ್ಮರಾದ ನಾಡಿನಲ್ಲಿ ಜನಿಸಿದರೂ, ಇಂದು ಅವರನ್ನ ಅನುಸರಿಸುವವರಿಲ್ಲ. ಬದುಕಲು ಬೇಕಾದುದನ್ನು ಗಳಿಸಲು ಸತ್ಯಮಾರ್ಗದಲ್ಲಿ ಕಷ್ಟಪಡಲು ಮನಸ್ಸು ಮಾಡದೆ ಹೇಗೋ ಗಳಿಸಿ ಬಾಳಿದರಾಯಿತೆನ್ನುವವ ಅಮರತ್ವದ ಕಲ್ಪನೆಯಿಲ್ಲದವರು, ದೇಹ ಶಾಶ್ವತವಾದುದಲ್ಲ. ಅದು ಅಳಿಯುತ್ತದೆ. ಹಾಗಾಗಿ ಜೀವಿಸಿದಷ್ಟು ದಿನವೂ ಸಾರ್ಥಕದಿಂದ ಬಾಳಬೇಕು. ಆತ ಬದುಕಿದಾಗ ಸಾಧಿಸಿದ ಸಾಧನೆಯ ಸ್ವರೂಪಕ್ಕೆ ಅಂತ್ಯವಿರುವುದಿಲ್ಲ. ಆತ್ಮಕ್ಕೆ ಅಳಿವಿಲ್ಲವೆಂಬ ನಿತ್ಯ ಸತ್ಯ ಅವಿವೇಕಿಗಳಿಗೆ ಗೊತ್ತಿಲ್ಲ. ಅದನ್ನು ಈ ರೀತಿ ತಿಳಿಸುತ್ತಾರೆ.-

**``ಕ್ರೈಸ್ತ ಮತ್ತೆ ಹುಟ್ಟಿ ಬರಲಿಲ್ಲ.**

ಪೈಗಂಬರ ಮತ್ತೆ ಜನ್ಮ ತಾಳಲಿಲ್ಲ

ಸಾಕ್ರೇಟೀಸನಿಗೆ ಸಾಕಾಗಿ ಹೋಯ್ತು

ಮೋಹನ ದಾಸ ಸತ್ತರೂ ನಾವು ಬಾಳೇವಿ

ಸತ್ಯಕ್ಕೆ ಸಾವಿಲ್ಲ!?

ಗಾಂಧಿನ್ನ ಕೊಂದರು, ಸತ್ತರು,

ಗಾಂಧಿ ಸತ್ತ

ಇದು ಸುಳ್ಳಲ್ಲ''.[11]

ಕ್ರೈಸ್ತ, ಪೈಗಂಬರ್, ಸಾಕ್ರೇಟೀಸ್, ಮೋಹನದಾಸರು ಸತ್ತರು. ಆದರೆ ಅವರು ಸ್ಥಾಪಿಸಿದ ಧರ್ಮ ಇಂದಿಗೂ ಸತ್ತಿಲ್ಲ. ಇದು ಸತ್ಯ. ಹಾಗಾಗಿ ಸತ್ಯಕ್ಕೆ ಸಾವಿಲ್ಲ. ಗಾಂಧಿ ಸತ್ತಿರುವುದು ಸುಳ್ಳಲ್ಲ ಅವರು ತಂದುಕೊಟ್ಟ ಸ್ವಾತಂತ್ರ್ಯ ಜೀವಂತವಾಗಿದೆ. ನಾನು ಸತ್ಯವಂತ ಅಹಿಂಸಾವ್ರತ ಧಾರಿಗಳೆಂದು ಹೇಳುತ್ತಾ ನಡವಳಿಕೆಯಲ್ಲಿ ಹಿಂಸಾ ಮಾರ್ಗವನ್ನು ಅನುಸರಿಸುವವರು ಸತ್ಯ, ನ್ಯಾಯ, ಧರ್ಮಗಳಿಗೆ ಅಪವಾದಿಗಳಾಗಿರುವುದನ್ನು ವಿಡಂಬಿಸಿದ್ದಾರೆ.

ಮಹಾತ್ಮ ಗಾಂಧಿಯವರ ಕೊಲೆಯನ್ನೇ ಕೇಂದ್ರ ಬಿಂದು ಮಾಡಿ ಕೊಂಡು ಚಿಂತನೆ ನಡೆಸಿರುವ ಕವನ -` ಕೇಳಿರೊಂದು ಸೋಜಿಗ'

`` ಗಾಂಧಿ ದೇಹ ಬಿಟ್ಟರಂತೆ

ಜನರು ಅದನಾ ಸುಟ್ಟರಂತೆ

ಹೌದು, ಗಾಂಧಿ ಸತ್ತರಂತೆ

ಜನರು, ನಿಜವೆ, ಅತ್ತರಂತೆ''.[12]

ಗಾಂಧೀಜಿಯವರ ಪರಿಶ್ರಮದಿಂದ ಸ್ವಾತಂತ್ರ್ಯವಂತೂ ಬಂತು, ಪ್ರಜಾ ವ್ಯವಸ್ಥೆಯನ್ನು ಸೃಷ್ಟಿಸಿಕೊಂಡು ರಾಜಕಾರಣಿಗಳ ಕೈಯಲ್ಲಿ ಅಧಿಕಾರವನ್ನು ಕೊಟ್ಟು ಗಾಂಧಿಯವರು ಕಂಡ ರಾಮರಾಜ್ಯ ಎಂದು ಬರುವುದೋ ಎಂದು ಕಾಯುತ್ತಿದ್ದರೂ ಇಂದಿಗೂ ಅದು ಸಾಧ್ಯವಾಗಲಿಲ್ಲ. ಸ್ವಾರ್ಥ ನಾಯಕರು ಸುಖೀರಾಜ್ಯದ ಚಿಂತನೆಯನ್ನು ಬಿಟ್ಟು ಪ್ರತಿಷ್ಠೆಯನ್ನು ತೋರಿಸುತ್ತಾ ಮೆರೆಯುತ್ತಿದ್ದಾರೆ. ಹಾಗಾಗಿ ಅಂತಹ ಮಹಾತ್ಮ ಈಗಲೂ ಬದುಕಬೇಕಿತ್ತು ಎನಿಸುವುದು ಎಲ್ಲರ ಮನದಾಸೆ. ಅದನ್ನು ಗೋವಿಂದ ಪೈ -

``ಇನ್ನಿನಿಸು ನೀ ಮಹಾತ್ಮ ಬದುಕಬೇಕಿತ್ತು

ಈಗ ಭಾರತಕಗತ್ಯವಿದೆ ನಿನ್ನ

ಬಿರುಗಾಳಿಗೊಲೆವಹದಗದಂತಿಹುದಾಸತ್ತು

ನಿನ್ನ ಹೊರರಾರೊಯ್ಯೆರೇವಿನೊಳದನ್ನ''.[13]

ಮಹಾತ್ಮ ಗಾಂಧಿಯವರ ಅಗತ್ಯತೆಯನ್ನು ಈ ಪದ್ಯದಲ್ಲಿ ಸೂಚಿಸಿದ್ದಾರೆ.

ಮಹಾತ್ಮ ಗಾಂಧಿಯವರಂತೆಯೇ ಹೋರಾಟದಲ್ಲಿ ಸಕ್ರೀಯವಾಗಿ ಪಾಲ್ಗೊಂಡಿದ್ದಂತಹ ನೆಹರು ಅವರ ಮಹಾಚೈತನ್ಯಕ್ಕೆ ಸ್ವಾತಂತ್ರ್ಯ ದೊರೆತ ಸಂಗತಿ ತಿಳಿದು ಆತ್ಮಕ್ಕೆ ಸಂತೃಪ್ತಿ ದೊರೆಯಲೆಂದು ಕುವೆಂಪು ಅವರು `ಮತಿಲಾಲ ನೆಹರು' ಎಂಬ ಕವಿತೆಯಲ್ಲಿ

**`` ಪಂಜರದೊಳಿದ್ದರೂ ಸಿಂಹದಂತೆಯೆ ಬಾಳಿ**

**ಗರ್ಜಿಸುವೆ ತೆರಳಿದೈ! ನಿನ್ನ ಆ ಬಲ್ಮೆಯುಲಿ**

**ನಮ್ಮನೂ ಕಲಿ ಮಾಡಿಹುದು, ಸೆರೆಮನೆಯ ಸೀಳಿ**

**ಮುಕ್ತಾತ್ಮನಾಗಿರುವೆ ಮುಳುಗಿ ಚಿರಮುಕ್ತಿಯುಲಿ!**

**ಮತಿಲಾಲ, ನಿನ್ನ ದಹಿಸಿದ ಸೂಡಿನೂರಿಗಾಳಿ**

**ತಗುಲಿಹುದು ಸೆರೆಮನೆಗೆ! ನೋಡದಕೆ ಹಗೆಯ ಬಲಿ!''**[14]

ಗಾಂಧಿಯವರಂತೆ, ಶಾಂತಿ, ಸತ್ಯ, ಅಹಿಂಸೆ, ಉಪವಾಸ ಸತ್ಯಾಗ್ರಹದಿಂದ ಸ್ವಾತಂತ್ರ್ಯ ಪಡೆಯಬಹುದೆಂಬುದನ್ನು ನಂಬದೆ, ಬ್ರಿಟಿಷರಿಂದ ಕಿತ್ತುಕೊಳ್ಳುವ ತವಕದಲ್ಲಿದ್ದವರು. ಬದುಕಿದಷ್ಟು ದಿನವೂ ಸಿಂಹದಂತೆಯೇ ಇದ್ದವರು. ಭಾರತ ಬಂಧನದಲ್ಲಿದಂತಹ ಸಂದರ್ಭದಲ್ಲಿ ನಮ್ಮನ್ನಗಲಿ ಚಿರಮುಕ್ತಿಯನ್ನು ಪಡೆದರು. ಅಂದು ನಿಮ್ಮ ಮನದಲ್ಲಿ ಕುದಿಗೊಂಡ ಆಕ್ರೋಶಕ್ಕೆ ಇಂದು ಶತ್ರುವಿನ ಸಂಹಾರವಾಗಿದೆ. ನಿನ್ನ ಆ ಕಲಿತನಕ್ಕೆ ಭರತ ಖಂಡವೇ ಮರುಗುತ್ತಿದೆ.

ಆಧ್ಯಾತ್ಮಿಕ ನೆಲೆಯಲ್ಲಿ ಹೋರಾಡಿದ ರಾಮಕೃಷ್ಣ ಪರಮಹಂಸರವರನ್ನು ಕುರಿತು ಕುವೆಂಪು ಅವರು-

**`` ಭರತ ಖಂಡದ ನೀಲಗಗನವೆ ತಿಮಿರ ಮುಸುಗಿರಲು,**

**ಭಾರತೀಯರು ತಮ್ಮ ಧ್ಯೇಯವ ಮರೆತು ಮಲಗಿರಲು,**

**ಪರಮಹಂಸನೆ, ಉದಯಸೂರ್ಯನ ತೆರದಿ ರಂಜಿಸಿದೆ,**

**ಹೃದಯ ನಭದ ಜ್ಞಾನ ತಿಮಿರವನಿರದೆ ಭಂಜಿಸಿದೆ''.**[15]

ಭಾರತೀಯರು ತಮ್ಮ ಗುರಿ, ಧ್ಯೇಯವನ್ನು ಮರೆತಿರುವಾಗ ಅವರಿಗೆ ಆತ್ಮ ವಿಶ್ವಾಸವನ್ನು ತುಂಬಲು, ಭಾರತ ಧಾರ್ಮಿಕ ಅಂಧಕಾರದಲ್ಲಿ ಮುಳುಗಿದ್ದಾಗ ಪರಮಹಂಸರು ಉದಯಿಸಿದರು. ಇವರು ಇಡೀ ಜಾಗತಿಕ ಚಿಂತನೆ ಮತ್ತು ಧರ್ಮ ಚಿಂತನೆಗಳನ್ನು ಒಟ್ಟಿಗೆ ಸೇರಿಸುತ್ತಾರೆ.

ಕುವೆಂಪು ಅವರು ಎಲ್ಲಾ ಮಹಾತ್ಮರಿಗೂ ನಮಸ್ಕಾರವನ್ನು ತಿಳಿಸುವುದರ ಮೂಲಕ ವಿಶ್ವ ಪ್ರೇಮಿಯಾಗುತ್ತಾರೆ.

**``ಅಜ್ಞಾತ ಮಹಾತ್ಮನೆ, ನಿನಗಿದೋ ನಮಸ್ಕಾರ!**

**ಸಾಷ್ಟಾಂಗ ನಮಸ್ಕಾರ!**

**ನೀನಾರೆ ಆಗಿರಲಿ, ನೀನೆಲ್ಲಿಯೆ ಇರಲಿ, ನಿನಗಿದೋ ನಮಸ್ಕಾರ!**

**ಸಾಷ್ಟಾಂಗ ನಮಸ್ಕಾರ!''**[16]

ಮಹಾತ್ಮರಾದವರು ಜಗತ್ತಿನ ಯಾವ ಮೂಲೆಯಲ್ಲಾದರೂ, ಯಾವ ರೂಪದಲ್ಲಾಗಲಿ, ಹೇಗಾದರೂ ಇರಲಿ, ಎಲ್ಲಾ

ಮಹಾತ್ಮರಿಗೂ ನಮನ ಸಲ್ಲಿಸುತ್ತಾರೆ. ಅಲ್ಲೂ ಯಾವುದೇ ಭೇದವಿಲ್ಲ. ಕನ್ನಡದಲ್ಲಿ ಈತರದ ಪ್ರಯೋಗ ತುಂಬಾ ಅಪರೂಪ.

ಹೋರಾಟಗಾರರನ್ನು ಕುರಿತು ಕವನಗಳಲ್ಲಿ ಮಹಾತ್ಮ ಗಾಂಧಿಯವರನ್ನು ಸ್ಮರಿಸುವುದೇ ಹೆಚ್ಚಾಗಿ ಕಂಡುಬರುತ್ತದೆ. ಉಳಿದ ಹೋರಾಟಗಾರರ ಬಗೆಗಿನ ಕವಿತೆಗಳು ನನಗೆ ಬಹಳ ಲಭ್ಯವಾಗಲಿಲ್ಲ.

## ಅಡಿ ಟಿಪ್ಪಣಿಗಳು

1. ವಾಮನಬೇಂದ್ರೆ; ಅಂಬಿಕಾತನಯದತ್ತ ಸಮಗ್ರ ಕಾವ್ಯ;ಸಂಪುಟ-2 ಪುಟ-359

2. ಕುವೆಂಪು ಸಮಗ್ರ ಕಾವ್ಯ;ಸಂಪುಟ-1, ಪುಟ-510

3. ಅದೇ...

4.ಪು.ತಿ.ನರಸಿಂಹಾಚಾರ್;ಸುವರ್ಣ ಸಂಪುಟ; ಪುಟ-30

5.ಅದೇ..

6.ಗೋವಿಂದ ಪೈ;ಗಿಳಿವಿಂಡು;ಪುಟ-34

7.ಕಯ್ಯಾರ ಕಿಞ್ಞಣ್ಣರೈ; ಶತಮಾನದ ಗಾನ;ಪುಟ-52

8.ಕುವೆಂಪು ಸಮಗ್ರ ಕಾವ್ಯ;ಸಂಪುಟ-2, ಪುಟ-86

9.ಗೋವಿಂದಪೈ;ಗಿಳಿವಿಂಡು;ಪುಟ-46

10.ವಾಮನಬೇಂದ್ರೆ;ಅಂಬಿಕಾತನಯದತ್ತ ಸಮಗ್ರ ಕಾವ್ಯ;ಸಂಪುಟ-1, ಪುಟ-422

11.ಅದೇ.. ಪುಟ-411

12. ಅದೇ.. ಪುಟ-418

13.ಗೋವಿಂದ ಪೈ;ಹೃದಯರಂಗ;ಪುಟ-04

14.ಕುವೆಂಪು ಸಮಗ್ರ ಕಾವ್ಯ;ಸಂಪುಟ-1 ಪುಟ-511

15.ಅದೇ.. ಪುಟ-534

16. ಅದೇ.. ಸಂಪುಟ-2, ಪುಟ-509

## ೪.ಸಾಮಾಜಿಕ ಪರಿವರ್ತನೆ

ಕವಿ ಯಾವುದೇ ಒಂದು ನಿರ್ದಿಷ್ಟ ಕಾಲಮಾನದಲ್ಲಿ ಹುಟ್ಟಿ, ಬದುಕಿ ಬಾಳಿ ಗತಿಸಿ ಹೋಗುತ್ತಾನೆ. ಆತ ಬದುಕಿದ್ದ ಕಾಲದಲ್ಲಿನ ಸಾಮಾಜಿಕ ಸ್ಥಿತಿಗತಿಗಳನ್ನು ಬರಹಕ್ಕಿಳಿಸಲು ಪ್ರಯತ್ನಿಸುತ್ತಾರೆ. ಆ ಪ್ರಯತ್ನದ ಫಲವಾಗಿಯೇ ಕೃತಿಗಳ ರೂಪದಲ್ಲಿ ಆ ಕಾಲದ ಸಾಮಾಜಿಕ ಸಂದರ್ಭಗಳನ್ನು ತಿಳಿಸಲಾಗುವುದು. ಭಾರತೀಯ ಸಮಾಜ ಬಹು ಪ್ರಾಚೀನ ಕಾಲದಿಂದಲೂ ಶ್ರೇಣೀಕೃತ ವ್ಯವಸ್ಥೆಯಲ್ಲಿ ಬೆಳೆದು ಬಂದಿರುವುದನ್ನು ಕಾಣಬಹುದು. ಯಾವುದೇ ಸಾಮಾಜಿಕ ವ್ಯವಸ್ಥೆಯು ಸಮಸ್ಯೆಗಳಿಂದ ಮುಕ್ತವಾಗಿರುವುದಿಲ್ಲ. ಹಾಗಾಗಿ ಕವಿಗಳು ಆ ಸಮಾಜದಲ್ಲಿನ ಸಾಮಾಜಿಕ ವೈರುಧ್ಯಗಳಿಗೆ ಸಂವೇದನೆಯನ್ನು ತೋರಿಸುತ್ತಾರೆ. ಆ ಸಮಾಜವನ್ನು ಪರಿವರ್ತಿಸಲು ಹಂಬಲಿಸುತ್ತಾರೆ.

ಪುರಾತನ ಕಾಲದಿಂದಲೂ ಭಾರತೀಯ ಸಮಾಜದಲ್ಲಿ ಜಾತಿ, ವರ್ಣ, ವರ್ಗ, ಧರ್ಮ ಸಂಘರ್ಷಗಳು ನಡೆಯುತ್ತಲೇ ಬಂದಿವೆ. ಹಾಗೆಯೆ ಬಡತನ, ಹಸಿವು, ದಾರಿದ್ರ್ಯ, ಶೋಷಣೆ, ಅಸಮಾನತೆ, ಅನ್ಯಾಯ, ಅಪಮಾನ ಎಂಬ ಪರಿಕಲ್ಪನೆಗಳು ಹೊಸ ಹೊಸ ರೂಪದಲ್ಲಿ ಬೆಳೆಯುತ್ತಾ ಬಂದಿವೆ. ಇವುಗಳ ವಿರುದ್ಧ ಮಾತನಾಡುತ್ತಾ ಸಾಮಾಜಿಕ ನ್ಯಾಯವನ್ನು ತಂದುಕೊಡುವ ಪ್ರಯತ್ನವನ್ನು ಕವಿಗಳು ಮಾಡುತ್ತಾ ಬಂದಿದ್ದಾರೆ. ಇದರಿಂದ ಸಾಮಾಜಿಕ ಪರಿವರ್ತನೆಯುಂಟಾಗಲು ದಾರಿ ತೋರಿಸುತ್ತಾರೆ.

ಹೊಸನ್ನಡ ಕಾಲದ ನವೋದಯ ಕವಿಗಳು ಸಾಮಾಜಿಕ ಪರಿವರ್ತನೆಯನ್ನುಂಟು ಮಾಡಲು ಸಾಮಾಜಿಕ ಸಮಸ್ಯೆಗಳ ಬಲೆಯನ್ನು ಬಿಡಿಸಲು ಶ್ರಮಿಸಿದ್ದಾರೆ. ಸಮಾನತೆಯ ಸ್ಥಾಪನೆ, ಜಾತಿ ವಿನಾಶ, ಬಡತನ, ಹಸಿವು, ದಾರಿದ್ರ್ಯಗಳಿಂದ ಮುಕ್ತಿ, ಶೋಷಣೆಯನ್ನು ತಪ್ಪಿಸುವುದು, ಕನಿಷ್ಠತೆಯಲ್ಲೂ ಶ್ರೇಷ್ಠತೆಯನ್ನು ಮೆರೆಯುವಂತಹ ಅಂಶಗಳನ್ನೇ ತಮ್ಮ ಕಾವ್ಯ ವಸ್ತುವಾಗಿ ತೆಗೆದುಕೊಂಡಿದ್ದಾರೆ.

ಭಾರತೀಯ ಸಮಾಜದಲ್ಲಿ `ಹೊಲೆಯ' ಎಂಬ ಪದವನ್ನು ಬಹಳ ನಿಕೃಷ್ಟ ಅರ್ಥದಲ್ಲಿ ಬಳಸುತ್ತಿದ್ದರು. ಅದಕ್ಕೆ ಹೊಸ ಅರ್ಥಗಳನ್ನು ಸೇರಿಸುತ್ತಾ ಬಂದರು. ಈಗ ಕೆಳ ಜಾತಿಯನ್ನು ಸೂಚಿಸುವ ಪದವಾಗಿ ಉಳಿದಿದೆ.

ಕೆಳ ಜಾತಿಯವನನ್ನು ಹೊಲೆಯ ಎಂದು ಗುರುತಿಸುವುದನ್ನು ಖಂಡಿಸಿ, ಗೋವಿಂದ ಪೈಯವರು ಅಂತಹ ಹೊಲೆಯನ ಕೆಲವು ಲಕ್ಷಣಗಳನ್ನು ಈ ರೀತಿಯಾಗಿ ಹೇಳುತ್ತಾರೆ.

**``ಹೊಲೆಯನಾರೂರ ಹೊರಗಿರುವವನೆ ಗೆಳೆಯ?**

**ಜಾತಿಯಿಂದಲ್ಲ ಗುಣದಿಂದಹನು ಹೊಲೆಯ''**

ಕೀಳು ಜಾತಿಯವರೆಂದು ಹೊಲೆಯರನ್ನು ಊರ ಹೊರಗಿಡುವ ಪದ್ಧತಿಯಿತ್ತು. ಆದರೆ ಈಗ ಹೊಲೆಯನನ್ನು ಗುರುತಿಸುವುದು ಊರ ಹೊರಗಿರುವನೆಂದಾಗಲಿ, ಜಾತಿಯಿಂದಾಗಲಿ ಅಲ್ಲ. ವ್ಯಕ್ತಿಯ ಗುಣದಿಂದ ಹೊಲೆತನವನ್ನು ಕಾಣಲಾಗುತ್ತದೆ.

**`` ಹೆಂಡ ಕುಡಿದರಸು ಬೀದಿಯಲಿ ತಿರಿವವ ಹೊಲೆಯ**

**ಹಣವಿಟ್ಟು, ಜೂಜಾಟವಾಡುವವ ಹೊಲೆಯ!**

**ತನ್ನೊಡವೆ ಮಡದಿಯಲಿ ತೃಪ್ತಿ ಪಡೆದವ ಹೊಲೆಯ,**

**ಪರರ ಧನವನಿತೆಯರ ಬಯಸುವವ ಹೊಲೆಯ''.**[1]

ಸಮಾಜಕ್ಕೆ ಹುಣ್ಣಾಗಿ ಪರಿಣಮಿಸಿಕೊಂಡಿರುವ ಹೆಂಡ, ಜೂಜಾಟಗಳಲ್ಲಿ ತೊಡಗಿರುವವರು, ಪರರ ಸಂಪತ್ತನ್ನು,

ಪರಸತಿಯನ್ನು ಬಯಸಿ, ತನಗೆ ದೊರೆಕಿರುವುದರಲ್ಲಿ ತೃಪ್ತಿ ಕಾಣದೆ ಅಲೆಯುವವನನ್ನು ಹೊಲೆಯನೆಂದು ಗುರುತಿಸುತ್ತಾರೆ.

**``ಶುದ್ಧ ತಾನೆಂದು ಪರರನು ಮುಟ್ಟದವ ಹೊಲೆಯ**

**ಹೊಲೆಯರೆಂದನ್ಯರನು ಕರೆವವನೆ ಹೊಲೆಯ**

**ತಾನು ಮೇಲೆಂದುಬ್ಬಿ ಹೀನೈಸುವವ ಹೊಲೆಯ**

**ಕೀಳುದಸೆಯವರನುದ್ಧರಿಸದವ ಹೊಲೆಯ''.** [2]

ಯಾವ ಮನುಷ್ಯ ತಾನು ಶುದ್ಧನೆಂದು, ಇತರರನ್ನು ಮುಟ್ಟದವನನ್ನು ಹೊಲೆಯರು ಎಂದು ಬೇರೆಯವರನ್ನು ಗುರುತಿಸುವವನು, ತಾನೇ ಶ್ರೇಷ್ಠನೆಂದು ಆರ್ಥಿಕವಾಗಿ ಹಿಂದುಳಿದಿರುವ ಬಡವರ, ಕಷ್ಟ ಕಾರ್ಪಣ್ಯಗಳನ್ನು ಎದುರಿಸುತ್ತಿರುವವರಿಗೆ ಸ್ಪಂದಿಸದೆ, ಅವರ ಉದ್ಧಾರಕ್ಕೆ ಶ್ರಮಿಸದವನನ್ನು ಹೊಲೆಯನೆಂದು ಕರೆಯುತ್ತಾರೆ. ಒಟ್ಟಾರೆ ಇಲ್ಲಿ ಕವಿಗೆ ಸಮಾಜದ ಏಳಿಗೆಗಾಗಿ ದುಡಿಯದವರನ್ನು ಹೊಲೆಯನೆಂದು ಕರೆಯುವ ತವಕದಲ್ಲಿದ್ದಂತೆ, ಜಾತಿ ವಿನಾಶದ ಆಶಯವಿರುವುದನ್ನು ಕಾಣುತ್ತೇವೆ.

ಸಮಾಜದಲ್ಲಿ ಶೋಷಣೆಗೆ ಮಿತಿ ಎಂಬುದೇ ಇಲ್ಲ. ಮಿತಿ ಮೀರಿದಾಗ ಶೋಷಿತವರ್ಗವನ್ನು ಧಿಕ್ಕರಿಸಿ ನಿಲ್ಲುವ ಸ್ಥೈರ್ಯವಿರುವುದನ್ನು ಪಂಜೆ ಮಂಗೇಶರಾಯರ `ಹೊಲೆಯ ಹಾಡು' ಎಂಬ ಕವನದಲ್ಲಿ ಈ ರೀತಿಯಾಗಿ ಮೂಡಿ ಬಂದಿದೆ -

**``ಉಳ್ಳಯಾ, ದಯೆಗೊಳ್ಳಯಾ!**

**ದಟ್ಟದಿಕ್ಕಾ! ಮಾರಿ, ಮುಂಡ, ಮುಂಡಾಳ!**

**ಹುಟ್ಟು ಹೊಲೆಯ! ಪೋಲಾ! ಚಂಡ ಚಂಡಾಳ!**

**ಬೊಟ್ಟು!ಬೊಗ್ಗರ! '' ಎಂದು ಹೆಸರೆತ್ತಿ ಕೂಗಿ**

**ಮುಟ್ಟಲಂಜುತೆ ನಿಲ್ವೆ ದೂರಕ್ಕೆ ಹೋಗಿ!**

**ಮಾರಿ ಹೊಲೆಯ, ಬಾವಿ, ಕೆರೆ ಮುಟ್ಟಲಾರೆ,**

**ಊರ ಸಾಲೆಗಳಂತೆ;ನಮಗೊಂದು ಬೇರೆ!**

**``ದೂರಕ್ಕೆ ಪೊ!ಪೊ'' ಯಾವುದೀ ನ್ಯಾಯ?**

**ಹಾರುವ ! ಮಾಡಿದ್ದುಣ್ಣುವೆ, ಮಹಾರಾಯಾ!''** [3]

ಎಂಬ ಸಾಲುಗಳಲ್ಲಿ ಪಂಜೆಯವರು ನಿಧಾನವಾಗಿ ಶೋಷಿತವರ್ಗದಲ್ಲಿ ಏಳುತ್ತಿರುವ ಪ್ರತಿಭಟನೆಯ ಧ್ವನಿಯನ್ನು ವ್ಯಕ್ತಪಡಿಸಿದ್ದಾರೆ. ಕೆಳ ಜಾತಿಯವರನ್ನು ಅಪಮಾನ ಸೂಚಕವಾಗಿ ಈ ಶಬ್ದಗಳಿಂದಲೇ ಕರೆಯುತ್ತಿದ್ದು, ಮೇಲ್ಜಾತಿಯವರನ್ನು ಮುಟ್ಟಲೂ ಹೆದರಿ ದೂರ ನಿಂತರೂ ದೂರಕ್ಕೆ ಹೋಗು ಎನ್ನುವ ಮಾತುಗಳೇ ಬರುತ್ತವೆ. ಇದರಿಂದ ಬೇಸತ್ತ ಮನಸ್ಸು ಮೇಲ್ಜಾತಿಯವರೆಂದು ಬೀಗುತ್ತಿರವವರಿಗೆ ಮಾಡಿದ್ದುಣ್ಣುವೆ ಮಹಾರಾಯ ಎಂದು ಶಾಪ ನೀಡಿದಂತಿದೆ. ಮನುಷ್ಯ ತನ್ನ ಪಾಪ ಪುಣ್ಯಗಳ ಫಲವನ್ನು ಅನುಭವಿಸುತ್ತಾನೆ, ಇದರಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ ಎನ್ನುವುದನ್ನು ಒತ್ತಿ ಹೇಳಿದ್ದಾರೆ.

ಪಂಜೆ ಮಂಗೇಶ ರಾಯರವರು `ಕಡೆಕಂಜಿ' ಎಂಬ ಕಥನ ಕವನದಲ್ಲಿ ಆತ್ಮಾಭಿಮಾನವನ್ನು ಕಳೆದುಕೊಳ್ಳಲು ಇಷ್ಟಪಡದ

ಕತೆಯನ್ನು ಹೇಳುತ್ತಾರೆ. ಇಲ್ಲಿ ಬರಮಸೆಟ್ಟಿ ಎಂಬುವವನು ಕಾಡಿನಲ್ಲಿ ಸಿಕ್ಕ ಒಂದು ಕರುವನ್ನು ತಂದು ಸಾಕಿದ್ದು, ಅದರ ಸಂತಾನ ಬೆಳೆದು ಮನೆ ತುಂಬಿದ್ದು, ತನ್ನ ವ್ಯಸನಗಳಿಂದ ಎಲ್ಲ ಕಳೆದುಕೊಳ್ಳುತ್ತಾನೆ. ಕೊನೆಗೆ ಕೇವಲ ಒಂದು ಕರು ಉಳಿದಿರುತ್ತದೆ. ಅದನ್ನು ಮಾರಲಾರದೆ ಗೋಳಿಡುವುದನ್ನು ಪಂಜೆಯವರು ಭರಮಸೆಟ್ಟಿಯ ಮೂಲಕ ಆ ಚಿತ್ರಣವನ್ನು ಕಟ್ಟಿಕೊಡುತ್ತಾರೆ.

``ಕಂದು ಮೋರೆಯ, ನಾಂದ ಕಣ್ಣಿನ, ಮಿಂದ ಕೆನ್ನೆಯ ಮಸುಕಿನಾ

ಬಿಂದು ಹೊರಡುವ ಮೂಗು ಸುಯ್ಲಿನ, ನೊಂದು ನೋಯುವ ಸೆಟ್ಟಿಯಾ''

ಬರಮಸೆಟ್ಟಿಗೆ ದೊರೆ ಸಹಾಯ ಮಾಡುವ ಮುನ್ನ,

``ಬಡವನಾದರು ಬೇಡಲೊಲ್ಲೆನು, ಹಡೆದ ಮಕ್ಕಳ ಮಾರೆನು

ಕಡವ ಪರರಿಂ, ಒಡವೆ ಹೆರರಿಂ ಪಡೆಯೆ ಪಡೆಯನದೆಂದಿಗೂ''

ಅದಕ್ಕೆ ಬಲ್ಲಾಳ ದೊರೆಯು ಕೊಡುವ ಉತ್ತರ ಮಾರ್ಮಿಕವಾಗಿದೆ;

``ಬಿದ್ದುದಿಲ್ಲವು ಗದ್ದಿಗೆಯ ಮೇಲಿದ್ದ ನಿಮ್ಮಾಕಿವಿಯಲಿ

ಗದ್ದೆ ಉಳುವರ ಉದ್ದಗೋಳಿನ ಸದ್ದು ಸುದ್ದೀತನಕವಾ''.[4]

`` ಗದ್ದುಗೆಯ ಮೇಲಿದ್ದ ನಮಗೆ ಉಳುವವರ ಗೋಳಿನ ಕಥೆ ಸ್ವಲ್ಪವೂ ಕೂಡ ಬಿದ್ದಿಲ್ಲ ಎಂದು ಹೃದಯ ಕರಗಿ ಕನಿಕರದ ಸೌಹಾರ್ದವನ್ನು ತೋರುವ ಸನ್ನಿವೇಶ, ಯಾವುದೇ ಕಾಲದ ಪ್ರಭುತ್ವಗಳ ದುಃಖಕರ ಗೋಳಿಗೆ ಕಿವುಡಾಗಬಾರದೆಂಬುದನ್ನು, ಅಂಥವರ ಗೋಳಿಗೆ ಸ್ಪಂದಿಸಬೇಕಾದ ಬಗೆಯನ್ನು ಕವನ ಪರಿಣಾಮಕಾರಿಯಾಗಿ ಹೇಳುತ್ತದೆ".[5]

ಸಮಾಜದ ಅವ್ಯವಸ್ಥೆಗೆ ಕಾರಣಗಳನ್ನು ನೀಡುತ್ತಾ, ವೈಜ್ಞಾನಿಕ ಮಾರ್ಗದಲ್ಲಿ ಪರಿಹಾರಗಳನ್ನು ಕಂಡುಕೊಳ್ಳಲು ಕರೆ ನೀಡಿದ ಕವಿ, ಕುವೆಂಪು. ದೇವರು, ಧರ್ಮ, ಭೇದ ಭಾವದ ಮನೋಭಾವ ಸಮಾಜವನ್ನು ತುಂಬಾ ಕಾಡಿದಂತಿದೆ. ಆದ್ದರಿಂದಲೇ -

`` ಗುಡಿ ಚರ್ಚು ಮಸೀದೀಗಳ ಬಿಟ್ಟು ಹೊರ ಬನ್ನಿ

ಬಡತನದ ಬುಡಮಟ್ಟ ಕೀಳಬನ್ನಿ

ಮೌಢ್ಯತೆಯ ಮಾರಿಯನು ಹೊರದೂಡಲೈ ತನ್ನಿ

ವಿಜ್ಞಾನ ದೀವಿಗೆಯ ಹಿಡಿಯ ಬನ್ನಿ

ಓ ಬನ್ನಿ ಸೋದರರೆ ಬೇಗ ಬನ್ನಿ!''

ಮೌಢ್ಯ ಆಚರಣೆಗಳಿಗೆ, ಅಂಧತೆಗೆ, ಸಂಪ್ರದಾಯಕ್ಕೆ ಒಂದು ಪರಿಹಾರವನ್ನು ಸೂಚಿಸಿದ್ದಾರೆ. ವಿಜ್ಞಾನದ ದೀವಿಗೆಯನ್ನು ಪಡೆಯಲೇಳುತ್ತಾರೆ. ಈ ದೇಶದಲ್ಲಿ ಗುಡಿ, ಚರ್ಚು, ಮಸೀದಿಗಳು ಎಷ್ಟರ ಮಟ್ಟಿಗೆ ಕಟ್ಟಲ್ಪಟ್ಟು ಬೆಳೆಯುತ್ತವೋ ಅಷ್ಟರ ಮಟ್ಟಿಗೆ ಮೌಢ್ಯ, ಪಾಪ ಬೆಳೆಯುತ್ತಾ ಹೋಗುತ್ತದೆ. ಈ ಪಾಪದಿಂದ ಮುಕ್ತಿಯನ್ನು ಪಡೆಯಬೇಕಾದರೆ ಎಲ್ಲವನ್ನು ಬಿಟ್ಟು ಬರಬೇಕು.

``ಸಿಲುಕದಿರಿ ಮತವೆಂಬ ಮೋಹದಜ್ಞಾನಕ್ಕೆ;

ಮತಿಯಿಂದ ದುಡಿಯಿರೈ ಲೋಕ ಹಿತಕೆ''.[6]

ಮನುಷ್ಯ ಯಾವುದೇ ಮತವೆಂಬ ಬಂಧನದಲ್ಲಿ ಸಿಲುಕದೆ ಲೋಕದ ಹಿತಕ್ಕಾಗಿ ದುಡಿಯಲು ಕರೆ ಕೊಡುತ್ತಾರೆ. ಎಲ್ಲ ಬಂಧನಗಳಿಂದ ಮನುಷ್ಯನನ್ನು ಪಾರು ಮಾಡಲು ಮಾರ್ಗವನ್ನು ತೋರಿಸಿದ್ದಾರೆ.

ಸಮಾಜದಲ್ಲಿನ ವರ್ಗ ಸಂಘರ್ಷವನ್ನು ಕುರಿತಂತೆ ಬಡವ-ಬಲ್ಲಿದ, ಮೇಲು-ಕೀಳು, ಉತ್ತಮ-ಅಧಮ, ಒಡೆಯ-ಆಳು, ಶೋಷಕ-ಶೋಷಿತ ತಾರತಮ್ಯಗಳ ಪರಿಕಲ್ಪನೆಯನ್ನಿಟ್ಟುಕೊಂಡು

**``ಧನಿಕರ ಮನೆಗಳು ಒಂದೆಡೆ ನಿಂತಿವೆ,**

**ಬಡವರ ಗುಡಿಸಲು ಒಂದೆಡೆ ನಿಂತಿವೆ,**

**ಜ್ಯೋತಿಯ ಮಣಿದೀಪಗಳಲ್ಲಿ;**

**ಕತ್ತಲು, ಕಗ್ಗತ್ತಲು ಇಲ್ಲಿ!**

**ಹಾಡಿನ ನುಣ್ದನಿಯಿತ್ತ,**

**ಗೋಳಿನ ನೀಳ್ದನಿಯಿತ್ತ''.[7]**

ಶ್ರೀಮಂತ ಮತ್ತು ಬಡವರ ನಡುವಿನ ಭೇದಗಳನ್ನು ಗುರುತಿಸಲು ಮುಂದಾದ ಕವಿಗೆ ಧನಿಕರ ಮನೆಗಳು ಸಂತೋಷದ ಚಿಲುಮೆಯ ಗೂಡುಗಳಾಗಿ ಸಂಭ್ರಮದಿಂದಿರುವುದನ್ನು, ಬಡವರ ಮನೆಗಳು ಸದಾ ಗೋಳಿನಲ್ಲಿ ಕತ್ತಲೆಯ ಪ್ರಪಂಚದಲ್ಲಿರುವುದನ್ನು ಕಾಣಬಹುದು. ಶ್ರೀಮಂತರ ಸಂಭ್ರಮವನ್ನು ದೀಪಗಳು ಪ್ರಜ್ವಲಿಸಿದರೆ, ಬಡವರ ನಿಟ್ಟುಸಿರನ್ನು ಕತ್ತಲು ಆವರಿಸಿರುವುದನ್ನು ಮಾರ್ಮಿಕವಾಗಿ ತಂದಿದ್ದಾರೆ. ಇದನ್ನು ಸ್ಪಷ್ಟಪಡಿಸಲು-

**`` ಕೊಳನು ಹೆಮ್ಮೆಗೆ ಬಿಸುಡುವುರಲ್ಲಿ**

**ಹೊಟ್ಟೆಗೆ ಇಲ್ಲದೆ ಕೊರಗುವರಿಲ್ಲಿ!**

**ಆ ಕಡೆ ಉದ್ಯಾನ,**

**ಈ ಕಡೆ ಶ್ಮಶಾನ!**

**ಪೀತಾಂಬರಗಳ ಹೊದೆಯುವರಲ್ಲಿ**

**ಕಾಪೀನಕೆ ಚಿಂದಿಯು ಸಿಗದಿಲ್ಲಿ!''[8]**

ಮಾನವರ ನಡುವೆ ಹಬ್ಬಿನಿಂತಿರುವ ತರತಮಭಾವಗಳ ಪಟ್ಟಿಯನ್ನೇ ಮಾಡಿರುವಂತಿದೆ.

ಈ ಎಲ್ಲ ಅಸಮಾನತೆಗಳಿಂದ ಕುಗ್ಗಿಹೋದ ಸಾಮಾನ್ಯನಿಗೆ ಕುವೆಂಪು ಕಲ್ಕಿ ರೂಪವನ್ನು ತೊಡಿಸುತ್ತಾರೆ. ಸಾಮಾನ್ಯನು ತಾಳ್ಮೆ ಕಳೆದುಕೊಂಡು ತನಗಾದ ಅನ್ಯಾಯದ ವಿರುದ್ಧ ಸಿಡಿದು ನಿಂತರೆ ಏನಾಗುತ್ತದೆಂಬುದನ್ನು ಕನಸಿನ ರೂಪದಲ್ಲಿ ಬಿತ್ತರಿಸುತ್ತಾರೆ.

**``ಹಸಿವೆ ! ದಾಹಾ!'' ಎನ್ನುತ ಬಂದು,**

**``ರಕ್ತಾ ! ರಕ್ತಾ! ರಕ್ತಾ!'' ಎಂದು**

**ನೆತ್ತರು ಹೊಳೆಯಲಿ ಧುಮುಕಿದನು,**

**ಕುದುರೆಯೊಡನೆ ಧುಮ್ಮಿಕ್ಕಿದನು!**

**ಕುಡಿದನು ರಕ್ತವ ಮೊಗಮೊಗೆದು''**

ಬಡವರ ಹಸಿವಿನ ದಾಹದ ಕಟ್ಟೆಯೊಡೆದರೆ ಶ್ರೀಮಂತರನ್ನು ಬಗೆದು ಅವರ ನೆತ್ತರಿನ ಹೊಳೆಯಲ್ಲಿ ಮಿಂದು, ರಕ್ತವನ್ನು ಮೊಗೆಮೊಗೆದು ಕುಡಿಯುತ್ತಾನೆ. ಹೀಗೆ ಕುದಿಗೊಂಡ ಸಾಮಾನ್ಯನ ಆಕ್ರೋಶ ಕನಸ್ಸಿನಲ್ಲಿ ಸಾಧ್ಯವಾದುದು.

**``ಕಲ್ಕಿ ಕಲ್ಕಿ ಎನ್ನುತ ಚೀರಿ**

**ಕನಸೊಡೆದೆದ್ದೆ!**

**ಇನ್ನೆಲ್ಲಿಯ ನಿದ್ದೆ ?''**[9]

ಸಾಮಾನ್ಯನ ದೌರ್ಜನ್ಯ, ಹಿಂಸೆ, ಸಮಾಜದ ಅಂತ್ಯಸ್ಥಿತಿಯನ್ನು ಪಾಪದಿಂದ ತುಂಬಿದ ಸಮಾಜವನ್ನು ತೋರಿಸುತ್ತಾರೆ. ಕಲಿಯುಗದ ಅಂತ್ಯದಲ್ಲಿ ಕಲ್ಕಿ ಉದಯಿಸಿದರೆ ಕಂಡ ಕನಸು ಸಾಕಾರಗೊಳ್ಳುತ್ತದೆ. ಇಲ್ಲದಿದ್ದರೆ ಏನಾಗುತ್ತದೆಂಬುದನ್ನು ಈ ಮೂಲಕ ತಿಳಿಯಲಾಗುವುದು.

**``ಎಂದೆಂದಿಗೂ ನಿನಗಿದೆ ಗತಿಯೇನು?**

**ಶಿಲುಬೆಯ ಮೇಗಡೆ ನೇತಾಡುತಿಹೆ!**

**ಮುಳ್ಳಿನ ಮುಡಿಯನು ಇನ್ನೂ ಹೊತ್ತಿಹೆ!**

**ಕೈಕಾಲೆದೆಯಲಿ ಕಬ್ಬಿನ ಕೊರ್ಮೆಳೆ!**

**ಹರಿಯುತ್ತಿದೆ ಕೆನ್ನೀರಿನ ಬಿಸಿ ಹೊಳೆ!**

**ನಿನಗಿನ್ನೂ ತಪ್ಪದೆ ಈ ಗೋಳು? ''**[10]

ಸತ್ಯಕ್ಕಾಗಿ ಪ್ರಾಣತೆತ್ತ ಏಸು ಕ್ರಿಸ್ತನ ಸ್ಥಿತಿಯೇ ಇಂದಿನ ಸಾಮಾನ್ಯನ ಸ್ಥಿತಿಯಾಗಿದೆ. ಸಮಾಜದ ಸ್ವಾಸ್ಥ್ಯಕ್ಕೆ ಸಾಮಾನ್ಯನ ಪರಿಶ್ರಮವೇ ಕಾರಣವಾದರೂ ಮೇಲ್ನೋಟಕ್ಕೆ ಸಾಮಾನ್ಯರ ಉದ್ಧಾರಕ್ಕೆ ಟೊಂಕಕಟ್ಟಂತೆ ಕಂಡು, ವಾಸ್ತವದಲ್ಲಿ ಅವರ ಸ್ಥಿತಿ ಶೋಚನೀಯವಾಗಿರುವುದನ್ನು ಅವರಿಗೆ ಇನ್ನೂ ಈ ಅಸಮಾನತೆಯಿಂದ ಮುಕ್ತಿ ದೊರೆಯದಿರುವುದನ್ನು ಸಾಂಕೇತಿಕವಾಗಿ ನೋಡಬಹುದು. ಏಸುವಿನ ಸ್ಥಿತಿಯೇ ಸಾಮಾನ್ಯನಿಗೂ ಒದಗಿ ಬಂದಿರುವುದನ್ನು ಹೋಲಿಸಿ ನೋಡಬಹುದು.

ಸಮಾಜದ ಆಧಾರಸ್ತಂಭವಾಗಿರುವ ಬಡವ, ರೈತರನ್ನು ಕುರಿತು ಸಮಾಜದಲ್ಲಿ ಪ್ರಾಧಾನ್ಯತೆಯಿಲ್ಲದೆ ಇರುವ, ಕನಿಷ್ಠ ವಸ್ತುಗಳೆಂದು ಪರಿಗಣಿಸಲ್ಪಡುವ ಗೊಬ್ಬರ, ಹಿರೇಯ ಹೂವು, ವೃದ್ಧರನ್ನು ಕುರಿತು ಕಾವ್ಯ ರಚಿಸಿ ಸಮಾಜದಲ್ಲಿ ಯಾವುದೇ ಶ್ರೇಷ್ಠ-ಕನಿಷ್ಠ ಎಂಬುದಿಲ್ಲ ಎನ್ನುವುದನ್ನು, ಕನಿಷ್ಠದರಲ್ಲೇ ಶ್ರೇಷ್ಠತೆಯನ್ನು ಕಾಣುವಂತಹ ತುಡಿತವಿದೆ.

`ಮೊದಲನೆ ದೇವರು ಈ ಹಣ್ಣುಮುದುಕಿ'' ಎಂಬ ಕವಿತೆಯಲ್ಲಿ ಕಾಲದ ಸ್ಥಿತ್ಯಂತರಕ್ಕೆ ಒಡ್ಡಿರುವ, ಕೈಲಾಗದ, ಬೇರೆಯವರ ಆಸರೆಯಿಲ್ಲದೆ ಬದುಕಲಾರದ ಸ್ಥಿತಿಯಲ್ಲಿರುವ ಸಾಮಾಜಿಕ ರೋಗವಾಗಿ ಪರಿಗಣಿತವಾಗಿರುವ, ವೃದ್ಧರನ್ನು ಕುರಿತು ಬರೆದಿದ್ದಾರೆ. ಅಂತಹ ವೃದ್ಧರಿಗೆ ಹೇಗೆ ಆಸರೆಯಾಗಬೇಕೆನ್ನುವುದನ್ನು ಅವರ ಸೇವೆ ದೇವರ ಸೇವೆಗೆ ಸಮಾನವಾದುದೆಂದು ತಿಳಿಸುತ್ತಾರೆ.

ರೈತರಿಗೆ ಆಗುತ್ತಿರುವ ಶೋಷಣೆ ತಲ-ತಲಾಂತರಗಳಿಂದಲೂ ಅದು ನಡೆದೇ ಬಂದಿರುವಂತಹದ್ದು. ಅದು ಇಂದೂ ಮುಂದುವರಿಯುತ್ತಿರುವುದನ್ನು ಮನಗಂಡಿದ್ದಾರೆ.

``ಕರಿಯರದೊ ಬಿಳಿಯರದೊ ಯಾರದಾದರೆ ಏನು?

ಸಾಮ್ರಾಜ್ಯವಾಗಲಿ ಸುಲಿಗೆ ರೈತರಿಗೆ!

ವಿಜಯನಗರವೋ? ಮೊಗಲರಾಳ್ವಿಕೆಯೊ?

ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ!

ಕತ್ತಿ ಪರದೇಶಿಯಾದರೆ ಮಾತ್ರ ನೋವೆ?

ನಮ್ಮವರೆ ಹದಹಾಕಿ ತಿವಿದರದು ಹೂವೆ?''[11]

ಶೋಷಣೆ ಎನ್ನುವುದು ಪರಂಪರೆಯಿಂದಲೂ ರೂಢಿಸಿಕೊಂಡು ಬಂದಿರುವುದನ್ನು ತಿಳಿಸಿದ್ದಾರೆ. ಈ ಸಾಮ್ರಾಜ್ಯದಲ್ಲಿ ರೈತರಿಗೆ ಶೋಷಣೆಯಿಂದ ಮುಕ್ತಿ ದೊರೆಯಲಿಲ್ಲ. ಹಿಂಸೆಯನ್ನು ಸ್ವದೇಶಿಯರಿಂದ ವಿದೇಶಿಯರು, ಪರದೇಶಿಯರಿಂದ ನಮ್ಮವರು ಕೊಡುತ್ತಾ ಬಂದಿದ್ದರೂ ತುಳಿತಕ್ಕೆ ಒಳಗಾದವನು ಮಾತ್ರ ರೈತ.

`ಗೊಬ್ಬರದ ಜೀವನವನೆ ಹೀರಿ ಕೊಬ್ಬಿಹ ಹೂವೆ' ಎಂದು ಗೊಬ್ಬರ ಮತ್ತು ಹೂವು ಇವೆರಡರ ನಡುವಿನ ಸಾಂಕೇತಿಕ ಮಹತ್ವವನ್ನು ತಿಳಿಸುತ್ತಾರೆ.

` ಹಳಿಯದಿರೂ; ಇಂದೊ ನಾಳೆಯೊ ನೀನು ಕೆಳಗುರುಳಿ

ಗೊಬ್ಬರದೊಳೊಂದಾಗುವ ದಿನ ಮುಂದೆ ಕಾದಿಹುದು''.

ಎಂಬಲ್ಲಿ ಶ್ರೀಮಂತಿಕೆ ಎಂಬುದು ಶಾಶ್ವತವಲ್ಲ. ಬಡವರ ಪರಿಶ್ರಮದಿಂದ ಮೆರೆಯುತ್ತಿರುವ ಆ ಸಿರಿತನ ಅಳಿದರೆ ಕೆಳಗಿಳಿಯಲೇ ಬೇಕಾಗುತ್ತದೆ. ಆ ಕಾಲ ಬಂದೇ ಬರುತ್ತದೆ ಎಂಬ ಆಶಯವನ್ನು ವ್ಯಕ್ತಪಡಿಸುತ್ತಾರೆ.

ಈ ಎಲ್ಲದರ ನಡುವೆಯೂ ಸಾಮಾನ್ಯನ ಬದುಕಿನ ದೋಣಿ ಸಾಗುತ್ತಿದೆ. ಅದು ಎಂದು ದೂರದ ತೀರವನು ಸೇರುವುದೋ ನೋಡಬೇಕು.

ಮೇಲ್ವರ್ಗದವರು, ಅಧಿಕಾರಸ್ಥರು, ಅಧಿಕಾರವೆನ್ನುವುದು ನಮಗೆ ಅಂಟಿ ಬಂದಿರುವ ಸ್ವತ್ತು. ಅದನ್ನು ಯಾರು ಬದಲಾಯಿಸಲು ಸಾಧ್ಯವಾಗಲಿಲ್ಲ. ಅದು ಹಾಗೆ ಮುಂದುವರಿದುಕೊಂಡು ಬರುತ್ತಿದೆ ಎನ್ನುವುದನ್ನು ಮಾಸ್ತಿಯವರು ಮಾರ್ಮಿಕವಾಗಿ ಈ ರೀತಿ ಹೇಳುತ್ತಾರೆ-

``ಗಾಂಧೀಜಿ ಬರಲಿ ಯಾರೇ ಬರಲಿ ನಮಗೇನು?

ಈಸನಾತನ ಧರ್ಮವನು ನಾವು ಬಿಡುವೆವೇ?

ದೇವರೆಡೆ ಬರುವ ಅಧಿಕಾರವನು ಕೊಡುವೆವೇ

ಹೊಲೆಯರಿಗೆ? ಕೊಟ್ಟವೇ ಈ ಮತಕೆ ತಲೆಬೇನೆ

ಬಾರದೇ ? ಸಮನಾಗಬೇಕೆನೆ ಮುಸಲ್ಮಾನ

ಕ್ರೈಸ್ತ ಧರ್ಮಕೆ ಹೋಗಲಿ ನಾವು ಉತ್ತಮರು''.[12]

ನಮ್ಮ ಭಾರತ ದೇಶದಲ್ಲಿ ಅಧಿಕಾರವೆನ್ನುವುದು ಉಳ್ಳವರ ಪಾಲಿಗಿದೆ. ಗಾಂಧೀಜಿ ಬಂದು ನಮ್ಮವರನ್ನು ದಾಸ್ಯದಿಂದ ಪಾರು ಮಾಡಿ ಸರ್ವರ ಪ್ರಜಾ ರಾಜ್ಯ ನಿರ್ಮಾಣಗೊಳ್ಳಲು ಸಾಕಷ್ಟು ದುಡಿದರು. ಆದರೂ ಉಳ್ಳವರು ಮಾತ್ರ ಈ ದೇಶದ ಸಂಪತ್ತೆಲ್ಲ ನಮ್ಮದೆಂದು, ಅದನ್ನು ಅನುಭವಿಸುತ್ತಿರವರು ನಾವುಗಳೆ ಎಂಬಂತೆ ವರ್ತಿಸಿ, ಉಳ್ಳವರ ಸಾಮ್ರಾಜ್ಯವಾಗಿ ಹೋಗಿದೆ. ಸಾಮಾನ್ಯರಿಗೆ ಸ್ಥಾನ ಕಲ್ಪಿಸಿದರೂ ಅವರ ಉದ್ಧಾರ ಇನ್ನೂ ಸಾಧ್ಯವಾಗದಿರಲು ಅಧಿಕಾರಸ್ಥರ ಹೃದಯ ಮರು ಭೂಮಿಯಾಗಿದೆ ಎನ್ನುವುದನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

ಕಯ್ಯಾರ ಕಿಞ್ಞಣ್ಣರೈರವರು ಜಾತಿ ವೈಷಮ್ಯದ ಬಗ್ಗೆ ಆಕ್ರೋಶಗೊಂಡು ಕವಿತೆ ಬರೆದಿದ್ದಾರೆ. ಅವರ ` ಬಾ ಹೊರಗೆ' ಎಂಬ ಕವಿತೆಯಲ್ಲಿ ಪುರೋಹಿತಶಾಹಿ ವ್ಯವಸ್ಥೆಯನ್ನು ವಿಡಂಬಿಸಿದ್ದಾರೆ.

``ಪೂಜಾರಿ! ಇದೋ, ಸಾರಿ

ಹೇಳುತಿಹೆನು;

ನೂರಾರು ದೂರುಗಳ

ಕೇಳುತಿಹೆನು...



......................

........................

ದೇವರಿಗೆ ನಾನೊಬ್ಬ

ಹತ್ತಿರೆಂದು

ಮಿಕ್ಕವರು ಹೊಲೆಯವರು

ದೂರವೆಂದು;

ಇವಭಟ್ಟ ಅವ ಸೆಟ್ಟಿ

ಭೇದ ಹೂಡಿ''.[13]

ಪರಮಾತ್ಮನ ಹೆಸರಿನಲ್ಲಿ ಪಾಪ ಕೃತ್ಯ ಎಸಗುವ, ವೇದಗಳನ್ನು ಓದದೆಯೇ ಭೋಧನೆ ಮಾಡುವ ಪೂಜಾರಿಯನ್ನು ಮಾತಿನ ಚಾಟಿಯೇಟಿನಿಂದ ಎಚ್ಚರಿಸಿದ್ದಾರೆ. ಕಠಿಣ ಹೃದಯದ ತಾಮಸ ಬುದ್ಧಿಯ ಜನ ವರ್ಗವೊಂದು ದೇವರ ಹೆಸರಿನಲ್ಲಿ ಮಾಡುವ ನಯ ವಂಚನೆಯನ್ನು ಕವಿ ಇಲ್ಲಿ ಪ್ರತಿಭಟಿಸಿದ್ದಾರೆ.

ಬೇಂದ್ರೆಯವರು ಸಾಮಾಜಿಕ ಸಮಸ್ಯೆಗಳನ್ನು ಕಾವ್ಯ ವಸ್ತುವಾಗಿ ಬಳಸಿ, ಸಮಸ್ಯೆಗಳ ಹುಟ್ಟು, ಬೆಳವಣಿಗೆಯನ್ನು ಪ್ರತಿಮೆಗಳ ಮೂಲಕ ಬಿಚ್ಚಿಡಲು ಪ್ರಯತ್ನಿಸಿದ್ದಾರೆ. ಬಡತನ, ಹಸಿವು, ಅನ್ನ, ಬಾಲ್ಯ ವಿವಾಹ, ವೈಧವ್ಯ, ಜನಸಂಖ್ಯಾ ಸ್ಫೋಟ, ವೇಶ್ಯೆ, ಲಂಚ ಹೀಗೆ ಸಮಸ್ಯೆಯ ಮುಖಗಳನ್ನು ಪರಿಚಯಿಸುತ್ತಾರೆ. ಇದೆಲ್ಲವನ್ನು ಸಹಿಸಿಕೊಳ್ಳುವ ಗುಣ ಮನುಷ್ಯನಿಗಿದೆ. ಅವುಗಳನ್ನು ಏಕಾಏಕಿ

ಬಯಲಿಗೆಳೆದು ಪರಿಹಾರ ಪಡೆಯಲು ಸಾಧ್ಯವಿಲ್ಲ ಎಂಬುದನ್ನು ಅರಿತ ಬೇಂದ್ರೆಯವರು ಅದೆಲ್ಲವುಗಳಿಂದ ದೂರಾದ ಮುಕ್ತ ಸಮಾಜ ನಿರ್ಮಾಣಕ್ಕೆ ಮನುಷ್ಯನ ಪ್ರೀತಿಯೇ ಸರಿಯಾದ ಮಾರ್ಗ ಎಂಬುದನ್ನು ತೋರಿಸಿದ್ದಾರೆ.

ಹೆಣದ ಹಿಂದೆ ಮತ್ತು ಪುಟ್ಟ ವಿಧವೆ ಈ ಎರಡೂ ಕವನಗಳ ವಸ್ತುವು ವಿಧವೆ. ಅವರಿಬ್ಬರ ನಡುವೆಯೂ ಅಂತರವಿದೆ. ಸಮಾಜದ ಹಳೆಯ ರೂಢಿಗಳಿಗೆ ತುತ್ತಾಗಿ ಪುಟ್ಟ ವಿಧವೆಯಾಗುವ ಹೆಣ್ಣಿನ ಬಗ್ಗೆ ಕವಿಗೆ ಅನುಕಂಪವಿದೆ.

**``ಆಕೆಯಿದ್ದಳು ಕೂಸು; ಈತನಿನ್ನೂ ಹುಡುಗ**

**ಅವರ ತಾಯ್ತಂದೆಗಳ ಹಿಗ್ಗು ಎಷ್ಟು !**

**ಧರ್ಮದಾ ಹೆಸರಿನಲಿ ಅವರ ಕೈಕೂಡಿಸಲು**

**ಇವರಿಗೆನಿಸಿತು ಹರ್ಷ ಹಬ್ಬದಷ್ಟು!''**

ಗಂಡು ಹೆಣ್ಣಿನ ತಂದೆ- ತಾಯಂದಿರು ಧರ್ಮದ ಹೆಸರಿನಲ್ಲಿ, ಅವರ ಮಕ್ಕಳಿಗೆ ವಿವಾಹ ಮಾಡಿ ಹಿಗ್ಗುತ್ತಾರೆಂಬುದನ್ನು ಇಲ್ಲಿ ಗುರುತಿಸುತ್ತಾರೆ. ಆ ಮೇಲೆ -

**``ವರ್ಷವೆಂಬುದರೊಳಗೆ ಚೊಚ್ಚಲದ ಸಂಭ್ರಮವು!**

**ದೈವದಾಟವು ಎಂದಿತಿಡಿಯ ಊರು**

**ಮಗನು ಬಂದಿರೆ ಇಹಕೆ, ತಂದೆ ವಾಲಿದ ಪರಕೆ;**

**ಕ್ಷೀರಸಾಗರವಾಯ್ತು ಉಪ್ಪುನೀರು''.**[14]

ಹೊಸಬಾಳಿನ ಹೊಸ್ತಿಲಲ್ಲಿದ್ದ ಆ ಪುಟ್ಟ ಹುಡುಗಿಯ ಗಂಡ ಸತ್ತ ಹತ್ತು ದಿನಗಳಲ್ಲಿ ವೈಧವ್ಯ ಪ್ರಾಪ್ತವಾಯಿತು. ಪುಟ್ಟ ವಿಧವೆ ಅತ್ತೂ ಕರೆದು, ಹಿರಿಯರ ಆಸರೆಯಲ್ಲಿ, ಧಾರ್ಮಿಕ ಕಟ್ಟಳೆಗಳ ಬಂಧನದಲ್ಲಿ ಹೇಗೋ ಅಂತೂ ಬಾಳುತ್ತಿರುವುದನ್ನು ಕಂಡಾಗ ಕವಿಗೆ ಆಕೆ ಕುರುಡು ಧರ್ಮದ ಸ್ಮಾರಕವಾಗಿ ಕಂಡಿದ್ದಾಳೆ.

`ಹೆಣದ ಹಿಂದೆ' ಕವನದಲ್ಲಿ ವಿಧವೆ ನೋವನ್ನು ನುಂಗಿ ಸಹಿಸಿಕೊಂಡು ಕಾಲಕಳೆದವಳಲ್ಲ.

**`` ಹೆಣ್ಣ ಮನದ ಕಣ್ಣ ಮುಂದೆ**

**ಬಂದು ಅವಳ ಕನವಿಸುವುದು**

**ಹೊಟ್ಟೆ ಕಿಚ್ಚ ಹೊತ್ತಿಸುವುದು**

**``ತುಳಿದು ಬಿಡುವೆ ಬಾಳನ್ನೆಲ್ಲ''**

**ಎಂಬ ಸೊಲ್ಲ ಹುಟ್ಟಿಸುವುದು''.**

ಇಲ್ಲಿ ವಿಧವೆಗೆ ನೆಂಟರಿಷ್ಟರಿಂದ ಯಾವುದೇ ಸಹಾಯ ದೊರೆತಿಲ್ಲ. ದಿಕ್ಕಿಲ್ಲದ ಸ್ಥಿತಿಗೆ ಬಂದು ನಿಂತಿದ್ದಾಳೆ. ಅತ್ತೂ ಕರೆದೂ ಸಾಕಾಗಿ ಕಟ್ಟ ಕಡೆಗೆ ಇಡೀ ಬಾಳನ್ನು ತುಳಿಯುವ ರೊಚ್ಚು ತಾಳಿದವಳು. ಇವಳ ಆಕ್ರೋಶಕ್ಕೆ ಕವಿಯ ಮನನ ನುಡಿಕೊಟ್ಟಿದೆ. ಇತರರು ನಿಲ್ಲಲು ನೆಲೆ ನಿರ್ಮಿಸುವುದಕ್ಕಾಗಿ, ಹೆಣ್ಣು ಬಂದುದಕ್ಕೆಲ್ಲಾ ತಲೆಯೊಡ್ಡಬೇಕೆಂಬ ಬೇಡಿಕೆಯನ್ನು ಮಂಡಿಸುತ್ತಾರೆ.

``ಬಂದುದೆಲ್ಲದಕ್ಕೆ ನೀನು

ತಲೆಯನೊಡ್ಡದಿರಲು ನಮಗೆ

ನಿಲ್ಲ ನೆಲೆಯು ಎಲ್ಲು ಇಲ್ಲ''.[15]

ಇಲ್ಲಿ ಹೆಣ್ಣಿಗೆ ಎಲ್ಲ ಕಷ್ಟಗಳನ್ನು ನುಂಗಲು ಹೇಳುತ್ತಾರೆ.

ಪುಟ್ಟ ವಿಧವೆಗೆ ಗಂಡ ಸತ್ತಾಗ ಬಂಧು ಬಳಗವೆಲ್ಲ ಬಂದು ಸಮಾಧಾನ ಹೇಳಿ ಅವಳ ರಕ್ಷಣೆಗೆ ನಿಂತರೆ, ಈ ವಿಧವೆ ಅನಾಥೆಯಾಗಿ, ನಿರ್ಗತಿಕಳಾಗಿ ಕಾಣುತ್ತಾಳೆ. ಇವಳ ಮದುವೆಯ ಸಂದರ್ಭದಲ್ಲಿ ಆನಂದೋತ್ಸಾಹದಿಂದ ಭಾಗವಹಿಸಿದವರು ಗಂಡ ಸತ್ತ ಮೇಲೆ ಇವಳ ಹತ್ತಿರ ಸುಳಿಯುವುದಿಲ್ಲ. ಕೆಲವರು ಬಂದರೂ ಇವಳಿಗೆ ಶಾಂತಿ ಪಾಠ ಹೇಳುವವರೇ ವಿನಾ ಆಸರೆಯಾಗಿ ನಿಲ್ಲುವವರಲ್ಲ. ಅದಕ್ಕಾಗಿ ಅವಳಿಗೆ ಆಕ್ರೋಶವಿದೆ. ಆದ್ದರಿಂದಲೇ ಬೇಸತ್ತು ಬಂಡೇಳುವ ಮನಸ್ಸು ಮಾಡುತ್ತಾಳೆ. ಆಗ ಕವಿ ನೋವು ನುಂಗಿ ಕೊಂಡು ಭೂ ಮಾತೆಯ ತಾಳ್ಮೆ ತಾಳಬೇಕೆಂದು ಕೇಳಿಕೊಳ್ಳುತ್ತಾರೆ. ಇಲ್ಲಿ ಕವಿ ಆಕೆಯನ್ನು ತಾಳ್ಮೆಯಿಂದಿರಲು ಹೇಳುವ ಬದಲು ಅವಳಿಗೆ ಬದುಕುವ ಭರವಸೆಯನ್ನು ತುಂಬಿ ಹೊಸಮಾರ್ಗವನ್ನು ತೋರಿಸಿದ್ದರೆ ಸಾಮಾಜಿಕ ಬದಲಾವಣೆಗೆ ಹೊಸ ಕಾಣಿಕೆ ನೀಡಿದಂತಾಗುತ್ತಿತ್ತು.

ಭೂಮಿ ತಾಯಿಯ ಚೊಚ್ಚಲ ಮಗ ರೈತನ ಉಸಿರೇ ಕೂಳಾಗಿ, ಕಂಬನಿಯೇ ಕುಡಿಯುವ ನೀರಾಗಿ, ಬೆವರೇ ಜಳಕವಾಗಿ, ಸಾಲದ ಶೂಲಕ್ಕೆ ಸಿಕ್ಕಿ ಹೊಟ್ಟೆಬಟ್ಟೆಗಿಲ್ಲದೆ ತಳಮಳಿಸುವ ರೈತನ ಚಿತ್ರವನ್ನು ಕಟ್ಟಿಕೊಟ್ಟಿದ್ದಾರೆ.

``ದಿನವೂ ಸಂಜೆಗೆ

ಬೆವರಿನ ಜಳಕ,

ಉಸಿರಿನ ಕೂಳಿಗೆ

ಕಂಬನಿಯ ನೀರು!

ಹೊಟ್ಟೆಯು ಹತ್ತಿತ್ತು

ಬೆನ್ನಿನ ಬೆನ್ನು

ಕೊರಳಿಗೆ ಹತ್ತಿದೆ

ಸಾಲದ ಶೂಲ

ಆದರೂ ಬರದೋ

ಯಮನಿಗೆ ಕರುಣ''.[16]

ಜನುಮವೆಂಬ ಕತ್ತಲೆಯಲ್ಲಿ ರೈತ ಬಿದ್ದಿದ್ದಾನೆ. ಕತ್ತಲನ್ನು ಸೀಳುವ ಬೆಳಕು ಬರಬೇಕಾದದು ಅತ್ಯಗತ್ಯ. ಆದರೆ ಆ ಬೆಳಕು ಯಾವುದಾಗಿರಬೇಕೆಂಬುದು ಮುಖ್ಯ. ಭೂಮಿತಾಯಿಯ ಚೊಚ್ಚಲ ಮಗ ಇಂಥ ದಾರುಣ ಸ್ಥಿತಿಯಲ್ಲಿರುವಾಗ, ಯಾವುದು ದುಡಿಮೆಗೆ ತಕ್ಕ ನ್ಯಾಯ ದೊರಕಿಸಿ ಭೂಮಿ ಮೇಲೆ ಬದುಕುವ ಅವಕಾಶ ಕಲ್ಪಿಸಿ, ಅವನನ್ನು ಅರ್ಥ ಪೂರ್ಣ ಮನುಷ್ಯನನ್ನಾಗಿ ಮಾಡುವುದೋ ಅದೇ ಅವನಿಗೆ ಬೆಳಕು. `ಆದರೂ ಬರದೋ, ಯಮನಿಗೆ ಕರುಣ' ಎಂಬ ಅನುತಾಪದಲ್ಲಿ, ಸಂಕಷ್ಟ ಸ್ಥಿತಿಯಲ್ಲಿರುವಾಗ ಸಾವನ್ನು

ಬೆಳಕೆಂದು ಹೇಳುವುದನ್ನು ಕಾಣಬಹುದು. ಇಲ್ಲೂ ಕೂಡ ರೈತನಿಗೆ ಸಾಮಾಜಿಕ ನ್ಯಾಯ ಕೊಡಿಸುವಲ್ಲಿ ಸಮಾಜ ಅನುವು ಮಾಡದಿರುವುದನ್ನು ಸೂಚಿಸುತ್ತದೆ.

ಸಮಾಜದಲ್ಲಿ ಜ್ವಲಂತ ಸಮಸ್ಯೆಯಾಗಿ ಕಾಡುತ್ತಿರುವ ಹಸಿವು ಮೂಲಭೂತವಾಗಿ ಒಂದು ಆರ್ಥಿಕ ಸಮಸ್ಯೆ. ಯಾವುದೇ ಸಮಾಜದ ಜನರ ಮೂಲಭೂತ ಅಗತ್ಯ ಅನ್ನ. ಅನೇಕರಿಗೆ ಅನ್ನ ಇಲ್ಲದ ದುಃಸ್ಥಿತಿಯಿರುವುದಕ್ಕೆ ಕಾರಣ ಸಮಾಜ. ಹಸಿವು ಸಮಸ್ಯೆಯ ಸ್ವರೂಪ ತಾಳಿರುವುದು ಸಮಾಜದಲ್ಲಿಯೇ.

**`` ಬಿಡಿಗಣ್ಣವರಿಗೆ**

**ಕಾಣುವುದಿಲ್ಲ**

**ಅಮೃತದ ತೇಗಿನ**

**ಮದವಂತಹದು!**

**ಹಸಿದವ ಬಲ್ಲ**

**ಹಸಿವೆಯ ಶೂಲ!**

**ದೇವರದೊಂದು**

**ಗೋರಿಯ ಕಟ್ಟಿ**

**ಧರ್ಮದ ಧೂಪಕೆ**

**ಬೆಂಕಿಯನಿಕ್ಕಿ''.** [17]

ಎಂಬಲ್ಲಿ ಆರ್ಥಿಕ ಸಮಸ್ಯೆಯೊಂದನ್ನು ಎತ್ತಿಕೊಂಡು ಅದಕ್ಕೆ ಧಾರ್ಮಿಕ ಸ್ವರೂಪ ಕೊಟ್ಟಿದ್ದಾರೆ. ಈ ದೇಶದಲ್ಲಿನ ಸಕಲ ಸಂಪತ್ತು, ಸೌಲಭ್ಯ ಕೆಲವರ ಸೊತ್ತಾಗಿದೆ. ಅವರು ಏನನ್ನೇ ಆಗಲಿ, ಎಷ್ಟಕ್ಕೆ ಆಗಲಿ ಕೊಳ್ಳುವ ಶಕ್ತಿ ಹೊಂದಿದ್ದಾರೆ. ಈ ಕೊಳ್ಳುವ ಶಕ್ತಿ ಬರಿಗೈಯವರನ್ನು ಕೊಲ್ಲುವ ಶಕ್ತಿಯೂ ಆಗಿದೆ. ತಮ್ಮ ಹಿತದ ಕಡೆ ಸದಾ ಜಾಗೃತರಾಗಿರುವ ಉಳ್ಳವರು, ಇಲ್ಲದವರನ್ನು ಶೋಷಣೆ ನಡೆಸುವ ಗಣ್ಯ ಮಹನೀಯರು. ಈ ಶೋಷಕ ವರ್ಗ ಶೋಷಿತ ವರ್ಗದ ಜಾಗೃತಿಯನ್ನು ಎಂದೂ ಬಯಸುವುದಿಲ್ಲ. ಶೋಷಿತರು ಎಷ್ಟು ಅಜ್ಞಾನದಲ್ಲಿರೆ ಅಷ್ಟೂ ಅವರಿಗೆ ಅನುಕೂಲವಾಗುತ್ತದೆ. ಜನರು ಬಹುಬೇಗ ನಂಬುವ, ಮರುಳಾಗುವ ಧಾರ್ಮಿಕ ವ್ಯವಸ್ಥೆಯನ್ನು ಸಾಧನವಾಗಿ ಬಳಸುತ್ತಾರೆ. ಶೋಷಿತರು ತನ್ನೆಲ್ಲಾ ಕಷ್ಟಸುಖಕ್ಕೆ ಕಾಣದ ಕೈ ಕಾರಣವೆಂದು ನಂಬುತ್ತಾರೆ. ಇದರಿಂದ ಸಮಾಜದಲ್ಲಿನ ಪ್ರತಿಷ್ಠರು, ಶೋಷಿತರು ರೊಚ್ಚಿಗೆದ್ದರೆ ಆಗುವ ತೊಂದರೆಯಿಂದ ತಪ್ಪಿಸಿಕೊಳ್ಳುತ್ತಾರೆ.

ಅನ್ನಾವತಾರದಲ್ಲಿ ಜಗತ್ತಿಗೆ ಯಾವತ್ತೂ ಸಮಸ್ಯೆಯಾದ ಅನ್ನದ ಸಮಗ್ರ ರೂಪವನ್ನು ಚಿತ್ರಿಸುವ ತುಡಿತವಿದೆ. ಆದರೆ ಬೇಂದ್ರೆ ಇಲ್ಲೂ ಕೂಡ ಮನುಷ್ಯನ ಮೂಲಭೂತ ಹಸಿವಿನ ಹಿಂದಿನ ಕಾರಣಗಳನ್ನಾಗಲೀ, ನಮ್ಮಲ್ಲಿ ಇಡೀ ವ್ಯವಸ್ಥೆ ಹೇಗೆ ಇದಕ್ಕೆಲ್ಲಾ ಮಾರಕವಾಗಿದೆ ಎಂಬುದರತ್ತಾಗಲೀ ಗಮನ ಹರಿಸುವುದಿಲ್ಲ. ಸಮಸ್ಯೆಯ ಒಂದು ದೃಶ್ಯವನ್ನು ಮಾತ್ರ ಕತ್ತರಿಸಿ ಇಟ್ಟಂತಾಗಿದೆ.

**``ಎಲ್ಲ ದೇವರು ಬಂದು**

ತಲ್ಲಣಗೊಂಡರು

ಇಲ್ಲಿಯವರ ಕಾಟ ಇಲ್ಲ್ಯುಳಿಯತಲ್ಲಾ

ಇಲ್ಲ್ಯೂಳಿಯತಲ್ಲಾ

ಅನ್ನ ದೇವರು ಮಾತ್ರ ಇನ್ನೂ ಬರಲಿಲ್ಲೋ

ಇನ್ನೂ ಬರಲಿಲ್ಲಾ".[18]

ಸಮಾಜದಲ್ಲಿ ಎಲ್ಲರೂ ಏನನ್ನೇ ಮಾಡಿದರೂ ಅದು ಅನ್ನಕ್ಕಾಗಿ. ಸಮಾಜದ ಎಲ್ಲ ಸಮಸ್ಯೆಗಳಿಗೂ ಪರಿಹಾರವಿದೆ. ಬೇರೊಂದು ಮಾರ್ಗವನ್ನು ಅನುಸರಿಸಿದರೆ ಅವನ್ನು ಸುಧಾರಿಸಬಹುದು. ಆದರೆ ಅನ್ನವನ್ನು ನೀಡುವ ಬೇರೊಂದು ದೈವ ಕಾಣಿಸಿಕೊಂಡಿಲ್ಲ. ಅದನ್ನು ನೀಗಿಸುವ ಶಕ್ತಿ ಇರುವವ ರೈತ. ಅವರ ಸುಧಾರಣೆಯ ಹೊರತು ಈ ಸಮಸ್ಯೆಯ ಪರಿಹಾರಕ್ಕೆ ಅನ್ಯ ಮಾರ್ಗವಿಲ್ಲ. ಅನ್ನದ ಅವತಾರವಾಗದೆ ಪ್ರಾಣಿಯ ಉದ್ಧಾರವಾಗುವಂತೆಯೇ ಇಲ್ಲ. ಈ ಅವತಾರವಾಗಬೇಕಾಗಿದೆ ಮಾನವನ ಮನಸ್ಸೆಂಬ ಲೋಕದಲ್ಲಿ.

ಸಾಮಾಜಿಕ ಸಮಸ್ಯೆಯ ಮತ್ತೊಂದು ಮುಖವಾದ ವೇಶ್ಯೆಯ ಬಾಳನ್ನು ಕುರಿತು `ಹುಬ್ಬಳ್ಳಿಯಾಂವಾ` ಎಂಬ ಕವಿತೆಯಲ್ಲಿ ಚಿತ್ರಿಸುತ್ತಾರೆ. ಇಲ್ಲಿನ ವೇಶ್ಯೆ ವಾಸ್ತವವಾಗಿ ಸಮಾಜದಲ್ಲಿ ಗುರುತಿಸುವ ಕೆಟ್ಟ ವೇಶ್ಯೆಯಲ್ಲ. ಇಲ್ಲಿ ಸಮಸ್ಯೆಯ ಮತ್ತೊಂದು ಮಗ್ಗಲನ್ನು ಪರಿಚಯಿಸುತ್ತಾರೆ.

ಸಮಾಜದಲ್ಲಿ ಪ್ರಚಲಿತವಾಗಿರುವ ಕೋಲಾಹಲವನ್ನು ಚಿತ್ರಿಸಿ, ಬದಲಾವಣೆಗಾಗಿ ಹೊಸ ಗಂಟೆ ಬಾರಿಸಲು ಸೂಚಿಸಿರುವ ಕವಿತೆ `ಕುಣಿಯೊಳಗ ಹೆಣಾ'-

`` ಕಾಡು ಮೃಗದ ತಳೀ ಐತಿ ಇನ್ನಾ

ಲಂಚಧಾಂಗ ತಿಂತಾವ ದಿನದನ್ನಾ

ತಂಮನಿಗೇ ಹಾಕತವ ಕನ್ನಾ

....................................

....................................

ಕುಣಿಸಬ್ಯಾಡಾ ನಿನ್ನದs ಹೆಣಾ

ಮಾತು ಒಣ ಒಣಾ

ಹೊಸ ಗಂಟಿ ಬಾರಿಸು ಗಣಗಣಾ".[19]

ಆಧುನಿಕ ಸಮಾಜದಲ್ಲಿ ಅತಿ ಹೆಚ್ಚಾಗಿ ಕಾಡುತ್ತಿರುವ ಲಂಚ, ಮೋಸವನ್ನು ಬಯಲಿಗೆಳೆದು ಅವುಗಳಿಂದ ಮುಕ್ತ ಸಮಾಜದ ನಿರ್ಮಾಣಕ್ಕೆ ಹೊಸ ಗಂಟೆ ಬಾರಿಸಲು ಕರೆ ನೀಡುತ್ತಾರೆ.

ಹೀಗೆ ಸಾಮಾಜಿಕ ವಿಷಮತೆಗಳನ್ನು ಹೋಗಲಾಡಿಸಿದರೆ ಸಾಮಾಜಿಕ ಪರಿವರ್ತನೆ ಸಾಧ್ಯ. `` ಬೇಂದ್ರೆಯವರು ಪರಿವರ್ತನೆಯ ಸಾಧ್ಯತೆಯನ್ನು ಕಂಡಿದ್ದು, ಕನಸಿದ್ದು ವ್ಯಕ್ತಿಯ ಹೃದಯದಲ್ಲಿಯೇ ಹೊರತು, ಸಾಮಾಜಿಕ ಹೋರಾಟಗಳ ಫಲವಾಗಿ ಇಡೀ

ಸಮುದಾಯದಲ್ಲಿಯೇ ಮೂಡುವ ಹೊಸ ಅರಿವಿನಲ್ಲಿ ಅಲ್ಲ" ಎಂಬುದನ್ನು ಅವರ ಕವಿತೆಗಳಲ್ಲಿನ ನಿಲುವಿನಿಂದ ಅರಿಯಲಾಗುತ್ತದೆ.

ಸಾಮಾಜಿಕ ಪರಿವರ್ತನೆಯನ್ನುಂಟುಮಾಡಲು ಸಾಮಾಜಿಕ ಸಮಸ್ಯೆಗಳ ವಿವಿಧ ಮಜಲುಗಳನ್ನು ನವೋದಯ ಕವಿಗಳು ಹೀಗೆ ಅನಾವರಣಗೊಳಿಸಿದ್ದಾರೆ.

## ಅಡಿ ಟಿಪ್ಪಣಿಗಳು

1. ಗೋವಿಂದಪೈ;ಗಿಳಿವಿಂಡು;ಪುಟ-16

2.ಅದೇ.. ಪುಟ-17

3.ಸಂ. ಹಂಪನಾಗರಾಜಯ್ಯ;ಹೊಸಗನ್ನಡ ಕವಿತೆ;ಪುಟ-10

4.ಸಂ. ಗಿರಡ್ಡಿಗೋವಿಂದರಾಜ;ಕನ್ನಡ ನವೋದಯ ಕಾವ್ಯ;ಮಂಗಳೂರು ಕೇಂದ್ರ;ಪುಟ-55

5.ಅದೇ... ಪುಟ-56

6.ಕುವೆಂಪು ಸಮಗ್ರ ಕಾವ್ಯ;ಸಂಪುಟ-1; ಪುಟ-372

7.ಅದೇ... ಪುಟ-168

8.ಅದೇ... ಪುಟ-169

9.ಅದೇ... ಪುಟ-171

10.ಅದೇ.. ಪುಟ-173

11.ಅದೇ... ಪುಟ-359

12.ಸಂ.ಹಂಪನಾಗರಾಜಯ್ಯ;ಹೊಸಗನ್ನಡ ಕವಿತೆ;ಪುಟ-39

13.ಸಂ. ಗಿರಡ್ಡಿ ಗೋವಿಂದರಾಜ;ಕನ್ನಡ ನವೋದಯ ಕಾವ್ಯ;ಮಂಗಳೂರು ಕೇಂದ್ರ;ಪುಟ-126

14.ವಾಮನ ಬೇಂದ್ರೆ;ಅಂಬಿಕಾತನಯದತ್ತ ಸಮಗ್ರ ಕಾವ್ಯ;ಸಂಪುಟ-2, ಪುಟ-98

15.ಅದೇ.. ಸಂಪುಟ-4, ಪುಟ-177

16.ಅದೇ.. ಪುಟ-14

17.ಅದೇ.. ಪುಟ-86

18.ಅದೇ... ಪುಟ-89

19.ಅದೇ.. ಸಂಪುಟ-5,ಪುಟ-165

## ೫. ರಾಜಕೀಯ ಪರಿವರ್ತನೆ

ಭವ್ಯ ಭಾರತ ದೇಶವನ್ನು ಅನೇಕ ರಾಜ ಮಹಾರಾಜರು ಆಳಿದ್ದಾರೆ. ಬಲಶಾಲಿಗಳಾದವರು ತಮ್ಮ ಶಕ್ತಿಸಾಮರ್ಥ್ಯಕ್ಕನುಸಾರವಾಗಿ ಸೂಕ್ತ ಪ್ರದೇಶದ ಜನರನ್ನು ಸಂಘಟಿಸಿ, ಆ ಪ್ರದೇಶದ ಮೇಲೆ ಪ್ರಭುತ್ವವನ್ನು ಸ್ಥಾಪಿಸಿ, ಅಲ್ಲಿನ ಜನರನ್ನು ತನ್ನ ಅಧೀನಕ್ಕೊಳಪಡಿಸಿಕೊಂಡು ಆಡಳಿತ ನಡೆಸುತ್ತಿದ್ದರು. ಹೀಗೆ ಪ್ರಬಲರಾಗುತ್ತಾ ಬಂದು, ಒಂದು ಪ್ರಬಲ ಸಾಮ್ರಾಜ್ಯದ ನಿರ್ಮಾಣವನ್ನು ಕೈಗೊಳ್ಳುತ್ತಿದ್ದರು. ಭಾರತದ ಸಂಪತ್ತನ್ನು ಕೊಳ್ಳೆ ಹೊಡೆಯಲು ವಿದೇಶಿಯರು ಯುದ್ಧ ತಂತ್ರವನ್ನನುಸರಿಸಿ ಭಾರತಕ್ಕೆ ಪ್ರವೇಶಿಸಿ, ಇಲ್ಲಿನ ಆಡಳಿತದಲ್ಲಿ ತಲೆಹಾಕಲು ಪ್ರಾರಂಭಿಸಿದರು. ನಂತರ ವ್ಯಾಪಾರದ ಉದ್ದೇಶವನ್ನು ಇಟ್ಟುಕೊಂಡು ಭಾರತದೊಡನೆ ಪಾಶ್ಚಿಮಾತ್ಯ ರಾಷ್ಟ್ರಗಳು ಸೌಹಾರ್ದತೆಯಿಂದಲೇ ಭಾರತಕ್ಕೆ ಬಂದರು. ಅನಂತರ ಇವರ ವಂಚನೆಯ ಸುಳಿಗೆ ಸಿಲುಕಿ ಭಾರತ ನಲುಗಿತು. ವಸಾಹತು ಶಾಹಿ ರಾಷ್ಟ್ರವಾಗಿ ಪರಿವರ್ತಿತವಾಯಿತು. ಕ್ರಮೇಣ ಬ್ರಿಟಿಷರು ಭಾರತದ ರಾಜಕೀಯವನ್ನು ಪ್ರವೇಶಿಸಿದರು. ದೇಶೀಯ ರಾಜರಿಗೆ ಆಸೆ ಆಮಿಷಗಳನ್ನು ತೋರಿಸಿ ತನ್ನೊಳಗೆ ಸೆಳೆದುಕೊಳ್ಳುವ ಅವರ ದೌರ್ಬಲ್ಯವನ್ನು ಉಪಯೋಗಿಸಿಕೊಳ್ಳುವ, ಇಲ್ಲಸಲ್ಲದ ಒತ್ತಡಗಳನ್ನು ಹೇರುವ ಕುಶಲತೆಯನ್ನು ಹೊಂದಿದ್ದ ಬ್ರಿಟಿಷರು ಭಾರತೀಯರನ್ನು ದಾಸ್ಯಕ್ಕೆ ಒಳಗು ಮಾಡಿದರು. ಇವರ ವ್ಯಗ್ರತೆಯನ್ನು ಅರಿತು, ಅವರ ಕಪಿ ಮುಷ್ಟಿಯಿಂದ ಬಿಡಿಸಿಕೊಳ್ಳಲು ಸ್ವಾತಂತ್ರ್ಯ ಆಂದೋಲವನ್ನೇ ಕೈಗೊಳ್ಳಬೇಕಾಯಿತು. ಈ ಎಲ್ಲ ರಾಜಕೀಯ ಅಂಶಗಳು ಸಾಹಿತ್ಯದ ಮೇಲೆ ಪ್ರಭಾವ ಬೀರಿರುವುದನ್ನು ಕಾಣಬಹುದು.

ಸಾಹಿತ್ಯಕ್ಕೂ ರಾಜಕೀಯಕ್ಕೂ ಯಾವುದೇ ಸಂಬಂಧವಿಲ್ಲವೆಂದು ಕೆಲವರು ಹೇಳುತ್ತಾರೆ. ರಾಜಕೀಯವನ್ನು ಬಿಟ್ಟ ಸಾಹಿತ್ಯ ನಿರ್ಜೀವ ಸಾಹಿತ್ಯವೆಂದು ಇನ್ನೂ ಕೆಲವರು ಕೂಗಿ ಹೇಳುತ್ತಾರೆ. ಈವರೆಗೆ ನಮ್ಮ ದೇಶದ ಸಾಹಿತ್ಯದ ಮೇಲೆ ರಾಜಕೀಯ ಪ್ರಭಾವ ಏಕೋ ಅಷ್ಟಾಗಿ ಆಗಲಿಲ್ಲವೆನ್ನುವುದಾದರೆ ಅದಕ್ಕೆ ಕಾರಣಗಳನ್ನು ತಿಳಿಯುವುದು ಸೂಕ್ತ. ರಾಜ ಪ್ರಭುತ್ವವಿದ್ದಲ್ಲಿ ಸಾಮಾನ್ಯವಾಗಿ ಆಸ್ಥಾನದ ಕವಿ ಪರಂಪರೆ ಬೆಳೆಯುತ್ತಿತ್ತು. ರಾಜ ಒಪ್ಪುವ ಅಥವಾ ಒಪ್ಪಿದ ರೀತಿಯ ಕಾವ್ಯಗಳಿಗೆ ದೊರೆಯುವಷ್ಟು ಪ್ರೋತ್ಸಾಹ ಉಳಿದ ರೀತಿಯ ಕೃತಿಗಳಿಗೆ ದೊರೆಯುತ್ತಿರಲಿಲ್ಲ. ಅಂತಹ ಸಂದರ್ಭದಲ್ಲಿ ರಾಜನನ್ನು ಮೆಚ್ಚಿಸುವುದಕ್ಕಾಗಿ ಕವಿಗಳು ಹಾತೊರೆಯುತ್ತಿದ್ದರು. ರಾಜನನ್ನು ಮೆಚ್ಚಿಸುವುದು, ರಾಜನ ಆಸ್ಥಾನದವರಿಂದ ಪ್ರಶಂಸೆ ಗಳಿಸುವುದು ಮುಖ್ಯವಾಗಿರುವುದರಿಂದ ಅಂಥ ಕೃತಿಗಳ ರಚನೆಗೆ ಕವಿಗಳು ತಮ್ಮ ಪ್ರತಿಭೆಯನ್ನು ಸಾಮಾನ್ಯವಾಗಿ ಧಾರೆಯೆರೆಯುವ ಪ್ರವೃತ್ತಿ ಬೆಳೆಯುತ್ತದೆ. ಇಂತಹ ಸಂದರ್ಭದಲ್ಲಿ ರಾಜರ ವಿರೋಧವನ್ನು, ಅಸಹನೆಯನ್ನು ತಾಳಿಕೊಳ್ಳುವುದು ಕಷ್ಟವಾಗುವುದರಿಂದ ಅವರಿಗೆ ಪ್ರಿಯವಾಗುವ ರೀತಿಯಲ್ಲಿ ಸಾಹಿತ್ಯವನ್ನು ರಚಿಸಲಾಗುತ್ತಿತ್ತು.

ರಾಜಕೀಯ ಕಾರಣಗಳಿಂದಾಗಿ ನಡೆಯುವ ಯುದ್ಧಗಳು, ಕ್ರಾಂತಿಗಳು, ಚಳವಳಿಗಳು ಸಾಹಿತ್ಯ ಸೃಷ್ಟಿಗೆ ಪ್ರೇರಣೆ ನೀಡಬಹುದು. ಹಾಗೆಯೇ ಬ್ರಿಟಿಷರ ವಿರುದ್ಧ ನಡೆದ ಸ್ವಾತಂತ್ರ್ಯ ಆಂದೋಲನ ಪ್ರಧಾನ ಧಾರೆಯಾಗಿ ಸಾಹಿತ್ಯದಲ್ಲಿ ಕಾಣಬೇಕಿತ್ತು. ಗಾಂಧಿಯವರ ನೇತೃತ್ವದಲ್ಲಿ ಆರಂಭವಾದ ಸತ್ಯಾಗ್ರಹ, ಚಳವಳಿ, ಸ್ವಾತಂತ್ರ್ಯ ಹೋರಾಟ, ಒಂದು ಅಮೋಘವಾದ ರಾಷ್ಟ್ರೀಯ ಸಾಹಿತ್ಯ ಸೃಷ್ಟಿಗೆ ಅವಕಾಶವನ್ನು ನೀಡಬೇಕಾಗಿತ್ತು. ಆದರೆ ರಾಜಕೀಯ ವ್ಯವಸ್ಥೆಯ ಅತಂತ್ರತೆಯಿಂದಾಗಿ ಸ್ವಲ್ಪ ಹಿಂಜರಿದಂತೆ ಕಾಣುತ್ತದೆ. ಈಗ ನಮ್ಮ ದೇಶಕ್ಕೆ ಸ್ವಾತಂತ್ರ್ಯ ಬಂದಿರುವುದರಿಂದ ಈ ಹೊಸ ರಾಜಕೀಯ ಪರಿಸ್ಥಿತಿ ನಮ್ಮ ದೇಶದ ಬೇರೆ ಬೇರೆ ಸಾಹಿತಿಗಳ ಮೇಲೆ ಅತಿಶಯವಾದ ಪ್ರಭಾವನ್ನು ಬೀರುವುದರಲ್ಲಿ ಸಂದೇಹವೇ ಇಲ್ಲ. ಇದುವರೆಗೂ ನಮ್ಮ ಚೆಲುವು ನಾಡಿನ ಕವಿ ಕೋಗಿಲೆಗಳ ಕಂಠವು ಕಟ್ಟಿದಂತಾಗಿತ್ತು.

ಈಗ ಅದಕ್ಕೆ ಮುಕ್ತಿ ದೊರೆತು, ಕವಿಗಳ ಸಾಹಿತ್ಯ ರಚನೆಯ ಧಾಟಿ ಬದಲಾಗಿದೆ.

ಈ ಎಲ್ಲ ರಾಜಕೀಯ ವಿದ್ಯಮಾನಗಳನ್ನು ಒಳಗೊಂಡಂತಹ ಕಾವ್ಯ ರಚಿಸಿದವರು ನವೋದಯ ಕವಿಗಳು. ಅವರು ರಾಜಕೀಯ ಪರಿವರ್ತನೆಯನ್ನು ಅಪೇಕ್ಷಿಸಿದ್ದು ಅದನ್ನು ಅವರು ಕಾವ್ಯದ ಮೂಲಕ ತೋರಿಸಿರುವುದನ್ನು ತಿಳಿಯೋಣ.

ರಾಜಕೀಯ ವ್ಯವಸ್ಥೆಯ ಕ್ರೌರ್ಯಗಳನ್ನು ಕಂಡು ಸಹಿಸದೆ, ಕಟಿಕಿ ನುಡಿಯಾಡಿ, ಅದಕ್ಕೆ ರಚನಾತ್ಮಕ ಸಲಹೆಗಳನ್ನು ಕವಿತೆಗಳಲ್ಲಿ ಸೂಚಿಸಿದ ಕವಿ ಕುವೆಂಪು. ಅಲ್ಲೆಲ್ಲಾ ಅವರ ವಿಚಾರಗಳು, ಚಿಂತನೆಗಳೂ ಕಾವ್ಯದ ರೂಪ ಪಡೆದಿವೆ. ಪ್ರಭುತ್ವ ಪದ್ಧತಿಯ ವಿರೋಧವನ್ನು ಕಾಣಬಹುದಾಗಿದೆ.

**``ಸರ್ವರಿಗೆ ಸಮಬಾಳು ಸರ್ವರಿಗೆ ಸಮಪಾಲು**

**ಎಂಬ ನವ ಯುಗವಾಣಿ ಘೋಷಿಸಿದೆ ಕೇಳಿ**

**ಯುಗಯುಗದ ದಾರಿದ್ರ್ಯ ಭಾರದಿಂದ ಬೆನ್‌ಬಾಗಿ**

**ಗೋಳಿಡುವ ಬಡಜನರೆ, ಏಳಿರೈ ಏಳಿ !''**[1]

ಸ್ವಾತಂತ್ರ್ಯ ಪೂರ್ವದಲ್ಲಿ ದೇಶ ಕೆಲವೇ ಜನರ ಸ್ವತ್ತಾಗಿತ್ತು. ಕಾನೂನು ನಿಯಮಾವಳಿಗಳು ಅವರಿಗೋಸ್ಕರ ರಚಿತವಾಗುತ್ತಿದ್ದವು. ಆದರೀಗ ಸರ್ವರಿಗೆ ಸಮಬಾಳು, ಸರ್ವರಿಗೆ ಸಮಪಾಲು ಎಂಬ ಮಂತ್ರಮೊಳಗುತ್ತಿದೆ. ಯುಗ -ಯುಗದಿಂದಲೂ ದಾಸ್ಯದಿಂದಲೇ ಬಾಗಿ ಗೋಳಿಡುತ್ತಿರುವ ಬಡ ಜನರೆ ಏಳಿ ಎಂದು ಹೋರಾಟಕ್ಕೆ ವೈಚಾರಿಕ ಕರೆ ನೀಡುತ್ತಾರೆ.

ಸರ್ವಾಧಿಕಾರ ಎಂಬುದು ತೊಲಗಿ ಹೋಗಬೇಕು, ಅದು ಈಗ ಸಾಧ್ಯವಾಗಿದೆ-

**`` ಇಂದ್ರ ಸಿಂಹಾಸನಕೆ ಬಂದಿಹುದು ಕೊನೆಗಾಲ**

**ಕಳಚಿ ಬೀಳುವುದಿಂದು ನಂದನದ ಬೇಲಿ!''**

ಅರಸೊತ್ತಿಗೆ ಸರಕಾರ ಕಳಚಿ ಸಮಾನತೆಯ ಸರ್ಕಾರ ಬರುತ್ತಿದೆ. ಶ್ರೀಮಂತರು ಶತ ಶತಮಾನಗಳಿಂದ ಕಟ್ಟಿಕೊಂಡು ಬಂದಿರುವ ನಮ್ಮದೇ ಸರ್ಕಾರ, ನಾವೇ ರಾಜರು, ನಾವು ದೇವರ ಪ್ರತಿನಿಧಿಗಳೆಂಬ ಅಹಂಕಾರ ಅಳಿಯಲಿ, ಬಡವರ ಉದ್ಧಾರ ಮಾಡುತ್ತಿದ್ದೇವೆಂದು ತೋರಿಸಿಕೊಳ್ಳುತ್ತಿರುವವರ ಮೊಗವಾಡವನ್ನು ಕಳಚಿರೆಂದು ಎಚ್ಚರಿಸುತ್ತಾರೆ.

**``ಕೈಲಾಗದವರೆಂಬ ನಾವು ಕೀಳೆಂದೆಂಬ**

**ಹಣೆ ಬರಹವೆಂದೆಂಬ ಮೂಢತೆಯ ನೀಗಿ**

**ಯುಗ ಚಕ್ರ ಪರಿವರ್ತನೆಗೆ ಸರ್ವರೂ ಸೇರಿ**

**ಹೆಗಲು ಕೊಟ್ಟೊಮ್ಮನಸು ಮಾಡಿ ನೆರವಾಗಿ!**

**ಮೋಹಿನಿಗೆ ಮರುಳಾಗಿ ಮೂರ್ಖ ದಾನವರೆಲ್ಲ**

**ತಮ್ಮಗೆಯ್ಮೆಯ ಪಾಲನನ್ಯರಿಗೆ ತೆತ್ತು**

**ಸತ್ತಂತೆ ಸಾಯದಿರಿ; ಸಂಸ್ಕೃತಿಯ ಹೆಸರಿಂದೆ**

ಶ್ರೀಮಂತರೊಡ್ಡುವಾ ಬಲೆ ನಿಮಗೆ ಮೃತ್ಯು!''[2]

ಕೈಲಾಗದವರೆಂದು ತಮ್ಮನ್ನು ತಾವೇ ಅಳಿದುಕೊಳ್ಳುವ, ಸಂಕುಚಿತ ಮನೋಭಾವದಿಂದ, ನಮ್ಮಲ್ಲಿರುವ ಅಜ್ಞಾನದಿಂದಾಗಿ ಯಾವುದೇ ಕೆಡುಕಿಗೂ ಹಣೆ ಬರಹವನ್ನೇ ದೂರುತ್ತಾ, ಆತ್ಮ ವಂಚನೆ ಮಾಡಿಕೊಳ್ಳುವುದನ್ನು ತಪ್ಪಿಸಲು ಕವಿ ಎಲ್ಲರಲ್ಲೂ ಬಲವಿದೆ. ಯುಗ ಚಕ್ರ ಪರಿವರ್ತನೆಗೆ ಸರ್ವರೂ ಸೇರಬೇಕೆಂದು ಕೂಗುತ್ತಾರೆ. ಆ ಕೂಗಿಗೆ ಸರ್ವರೂ ಹೆಗಲು ಕೊಡುವ ಮನಸ್ಸು ಮಾಡಿ ಮೋಹದ ಬಲೆಯಲ್ಲಿ ಸಿಲುಕಿ, ತಮ್ಮ ಸಾಮರ್ಥ್ಯದ ಬಲವನ್ನು ಅನ್ಯರಿಗೆ ಕೊಟ್ಟು ಸತ್ತಂತೆ ಬಾಳುತ್ತಿದ್ದೇವೆ. ಇದೆಲ್ಲವೂ ಶ್ರೀಮಂತರು ತಮ್ಮ ಅಧಿಕಾರವನ್ನು ಉಳಿಸಿಕೊಳ್ಳಲು ಹೆಣೆದಿರುವ ಮೃತ್ಯುವಿನ ಬಲೆ ಎಂಬುದನ್ನು ಮಾರ್ಮಿಕವಾಗಿ ಚಿತ್ರಿಸಿದ್ದಾರೆ.

``ಕೊನೆಗಂಡಿತೊ ಓರೊರ್ವರ ಗರ್ವದ ಕಾಲ,

ಇದು ಸರ್ವರ ಕಾಲ!''

ಸ್ವಾತಂತ್ರ್ಯ ಬಂದಾಗಲೇ ಕೊನೆಗಂಡಿತೋ ಸರ್ವಾಧಿಕಾರಿಗಳ ಕಾಲ, ಇದು ಸರ್ವರ ಕಾಲ ಎಂದು ಕರೆ ನೀಡಿದ್ದಾರೆ.

`` ನಿಲ್ ಇನ್, ದಿಟ್ಟಗೆ ನಿಲ್ ಇನ್

ಬಾಗಿದ ಸೊಂಟವ ನೆಟ್ಟಗಿಡು;

ಬೆದರಿದ ಬೆನ್ನಂ ನೇರ್ ಮಾಡು,

ನೆಲ ನೋಡುವ ಕಣ್ಣಂ ಮೇಲೆತ್ತಿ

ಅಭ್ಯಾಸಂ ಮರೆತಾ ತಲೆಯೆತ್ತಿ

ಎದುರಾಳಿಯ ಮೊಗ ನೋಡು!''[3]

ಗುಲಾಮಗಿರಿಗೆ ಸೋತು ಹೋಗಿರುವ ಸಾಮಾನ್ಯರು ತಮ್ಮ ದಾಷ್ಟ್ಯದಿಂದ ಮೇಲೆದ್ದು ನಿಲ್ಲಲು ಸೂಚಿಸುತ್ತಾರೆ. ಸ್ವಾತಂತ್ರ್ಯ ಬಂದಿರುವುದರಿಂದ ದಾರಿದ್ರ್ಯ ತೊಲಗಿ ಸ್ವತಂತ್ರವಾಗಿ ಬದುಕುವ, ನೆಲ ನೋಡುವ ಕಣ್ಣುಗಳು ಎದುರಾಳಿಯ ಮೊಗವನ್ನು ಎದುರಿಸುವ ಕಾಲ ಬಂದಿದೆ. ಯುಗ ಯುಗಗಳಿಂದಲೂ ಬಾಗಿರುವ ಸೊಂಟವನ್ನು ನೆಟ್ಟಗೆ ಮಾಡಿಕೊಂಡು ನಿಲ್ಲುವಂತವನಾಗು, ಗುಲಾಮಗಿರಿಗೆ ಪಕ್ವವಾಗಿರುವ, ಫ್ಯೂಡಲ್ ವ್ಯವಸ್ಥೆಗೆ ಬಾಗಿರುವ ಬೆನ್ನನ್ನು ನೆಟ್ಟಗೆ ಮಾಡು ಎಂದು ಹೇಳುವ ಮೂಲಕ ಪ್ರಜಾರಾಜ್ಯ ನಿರ್ಮಾಣಕ್ಕೆ ಶುಭ ಕೋರಿದ್ದಾರೆ.

``ತೊಲಗಿತು ನಿನ್ನೆಯ ನಾಯ್ ಪಾಡು;

ಇನ್ನಿದು ದಿಟಕೂ ನಿನ್ನಯ ತಾಯ್‌ನಾಡು!

ನಿನ್ನದೆ ನೆಲ! ನಿನ್ನದೆ ಹೊಲ

ನಿನ್ನದೆ ಕಾನ್! ನಿನ್ನದೆ ಬಾನ್!

ನಿನ್ನದೆ ನುಡಿ! ನಿನ್ನದೆ ಗುಡಿ!

ನಿನ್ನದೆ ಹೊಳೆ! ನಿನ್ನದೆ ಬೆಳೆ!

ನಿನಗಾಗಿಯೆ ನಿನ್ನೊಲವಿಗೆ

"ಇಸ್ ಮೀಸಲ್ ನೀ ಬೆಳೆವ ಬೆಳೆ!"[4]

ಗರ್ವದ ಕಾಲ ತೊಲಗಿ ಸರ್ವರ ಕಾಲ ಬಂದಾಗಿದೆ. ಈಗ ಸಾಮಾನ್ಯರ ಅತಂತ್ರ ಸ್ಥಿತಿಯೂ ಹೋಗಿದೆ. ಈಗ ಇದು ನಿನ್ನದೇ ತಾಯಿನಾಡು ! ನಿನ್ನ ಒಲವಿಗೆ ಇವೆಲ್ಲವೂ ಮೀಸಲಾಗಿದೆ. ಅಂದರೆ ಈ ದೇಶವು ಪರತಾಂತ್ರ್ಯದಿಂದ ಸ್ವಾತಂತ್ರ್ಯವನ್ನು ಪಡೆದುದು ಸಕಲ ಚರಾಚರ ವಸ್ತುಗಳಿಗೂ ದೊರೆತಂತೆ ಅವೆಲ್ಲವೂ ನಿನಗೆ ಸೇರಿದ್ದೆಂದು , ಪ್ರಜಾ ಪ್ರಭುತ್ವ ವ್ಯವಸ್ಥೆಯ ಲಕ್ಷಣಗಳನ್ನು ಮನಗಾಣಿಸಲು ಪ್ರಯತ್ನಿಸಿದ್ದಾರೆ.

೧೯೬೦ ರಲ್ಲಿ ನೆಹರು ಅವರು ವಿಶ್ವ ಸಂಸ್ಥೆಯಲ್ಲಿ ಭಾಷಣ ಮಾಡಿದುದನ್ನು ಕೇಳಿದಾಗ ರಚಿಸಿದ ಕವಿತೆ `ಅಲ್ಲಿ- ಇಲ್ಲಿ'

`` ಸ್ವಾತಂತ್ರ, ಐಕ್ಯತೆ, ಸರ್ವೋದಯ; ಸಮನ್ವಯ

ಸತ್ಯ, ಅಹಿಂಸಾ, ಸ್ನೇಹ, ದಯಾ,

ಚೀಣಾ, ಕಾಂಗೋ, ಮಂಗೋಲಿಯಾ

ಶಾಂತಿಯೊಂದರೊಳೆ ಇಕ್ಕೆಲಗಳಿಗೂ ಜಯ...,

ಇತ್ಯಾದಿ ಮೊಳಗಿತ್ತು".[5]

ಗಾಂಧಿ ಅನುಸರಿಸಿದ ಈ ತತ್ವಗಳೇ ಭಾರತೀಯ ಸಮಾಜ ಯಾವ ಕ್ರಾಂತಿಯನ್ನಾದರೂ ಅರಗಿಸಿಕೊಳ್ಳಬಲ್ಲ ಚೈತನ್ಯವಿದೆಯೆಂಬುದನ್ನು ತೋರಿಸುತ್ತವೆ. ಭಾರತದ ಆಡಳಿತವನ್ನು ನಾವೇ ರೂಪಿಸಿಕೊಂಡಿದ್ದೇವೆ. ಅಂದರೆ ಪ್ರಜಾಪ್ರಭುತ್ವ ಪದ್ಧತಿಯ ಮೂಲಕ ರಾಜಕೀಯ ನಡೆಯುತ್ತಿದೆ. ಇಂತಹ ಸಂದರ್ಭದಲ್ಲಿ ದಸರಾವನ್ನು ಆಚರಿಸುವುದು ಗುಲಾಮಗಿರಿಯ ಮತ್ತೊಂದು ರೂಪವಾಗಿ ಕವಿಗೆ ಕಾಣುತ್ತಿದೆ.

``ಇಲ್ಲಿಯೊ? ನಾಚಿಕೆಗೇಡು!

ದಸರಾ ದರ್ಬಾರು,

ಜಂಬೂ ಸವಾರಿ!

ಜರಿಯ ಪೇಟ, ಕರಿಯ ಕೋಟು !

ಬಿಳಿ ಷರಾಯಿ, ಉತ್ತರೀಯ!

ಬಗ್ಗು ಸೊಂಟ, ಡೊಗ್ಗು ಸಲಾಮು!

ಗುಲಾಮಿಗೂ ಚಿನ್ನದ ಮುಲಾಮು!

ಹಳೆಯ ಪಾಳೆಯಗಾರಿಕೆಗೆ ಹೊಸ ಪ್ರಹಸನ!

ಭಾರತದ ಪವಿತ್ರ ರಾಜ್ಯಾಂಗಕೂ ಅವಮಾನ!".[6]

ಆಧುನಿಕ ಸಂದರ್ಭದಲ್ಲಿ ದಸರಾವನ್ನು ಪುಟ್ಟಪ್ಪನವರು ವಿರೋಧಿಸುತ್ತಾರೆ. ನಮ್ಮದೇ ಸಂವಿಧಾನವನ್ನು ರಚಿಸಿಕೊಂಡು

ಪ್ರಜಾರಾಜ್ಯವನ್ನು ತಂದು, ರಾಜ್ಯಾಡಳಿತದಲ್ಲಿ ದಸರಾ ದರ್ಬಾರನ್ನು ಮಾಡುವುದು ಪ್ರಭುತ್ವವನ್ನು ಒಪ್ಪಿಕೊಂಡ ಮತ್ತೊಂದು ರೂಪ ಎನ್ನುತ್ತಾರೆ. ರಾಜರ ಮೆರವಣಿಗೆಯನ್ನು ಮಾಡುವ ಮೂಲಕ ಆತನಿಗೆ ಮತ್ತೊಮ್ಮೆ ಶರಣಾಗುತ್ತಿರುವ, ಆ ಮೂಲಕ ಪಾಳೇಗಾರಿಕೆಯನ್ನು ಒಪ್ಪಿಕೊಳ್ಳುವ ತಂತ್ರದಂತೆ ಕವಿಗೆ ಭಾಸವಾಗುತ್ತದೆ.

ಒಟ್ಟಾರೆ ಹೇಳುವುದಾದರೆ ಕುವೆಂಪು ಅವರಿಗೆ ಪ್ರಭುತ್ವ ಪದ್ಧತಿಯ ಬಗ್ಗೆ ವಿರೋಧವಿದ್ದು, ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ನಂಬಿಕೆಯಿದ್ದು, ಅದನ್ನು ಒಪ್ಪಿಕೊಂಡ ಕವಿ ಹೃದಯವಂತರಾಗಿ ಗೋಚರಿಸುತ್ತಾರೆ.

ಸ್ವಾತಂತ್ರ್ಯೋತ್ತರ ಭಾರತದ ರಾಜಕೀಯ ವ್ಯವಸ್ಥೆಯನ್ನು ಪ್ರಭುತ್ವ ಅಥವಾ ವಸಾಹತು ಶಾಹಿಯ ರಾಜಕೀಯದೊಂದಿಗೆ ಹೋಲಿಸಿ, ಸ್ವಾತಂತ್ರ್ಯ ನಂತರ, ರಾಜಕೀಯ ಕಂಡು ಬರುವ ಬಗೆಯನ್ನು ವಿವರಿಸಿರುವ ಕವಿ ಬೇಂದ್ರೆಯವರು,

``ಸ್ವಾತಂತ್ರವೋ ಇದುವು ಯಾತಂತ್ರವೊ  
ಬಲ್ಲವರ ಕೈಗೆ ಬಾಗುವ ಯಂತ್ರವೋ''.[7]

ಸ್ವಾತಂತ್ರ್ಯ ಪೂರ್ವದಲ್ಲಿ ನಮ್ಮ ಕನ್ನಡ ಕವಿಗಳು ಹೊಸ ನಾಡನ್ನು ಕಟ್ಟುವ ಆದರ್ಶವಾದಿಗಳಾಗಿ ಅನೇಕ ಮಹತ್ವದ ಕವಿತೆಗಳನ್ನು ಬರೆದಿದ್ದರು. ಆದರೆ ನಂತರದ ಪರಿಸ್ಥಿತಿಯನ್ನು ಅರಿತ ಕವಿಯ ಮಾತಿನಲ್ಲಿ ಮೊನಚಿದೆ. ವ್ಯಂಗ್ಯದ ವ್ಯಗ್ರತೆ ಯಿದೆ. ಅಷ್ಟೇ ಅರ್ಥದಲ್ಲಿ ಕವಿಗೆ ಜವಾಬ್ದಾರಿಯೂ ಇದೆ ಎಂಬುದಕ್ಕೆ ಅವರ ಇನ್ನಷ್ಟು ಉಕ್ತಿಗಳನ್ನು ಪರಾಮರ್ಶಿಸಿ ನೋಡಬಹುದು.

`` ಹೋರಾಟವು ಇನ್ನೂ ಇದೆ; ಇನ್ನೂ ಇದೆ ಸಾಧನಾ,  
ಮುಕ್ತ ಕಂಠ ಪ್ರಜೆಗಳಿಗೂ ಧರ್ಮದ ಆರಾಧನಾ!  
ಸ್ವೈರತೆಗೂ ಸ್ವಾತಂತ್ರ್ಯಕು ಇಹುದು ಅಜಗಜಾಂತರಾ  
ಸುವ್ಯವಸ್ಥೆ ಮಹಾತಂತ್ರ, ಬದ್ಧತೆ ಬರಿ ಯಂತರಾ''.[8]

ಭಾರತದ ಸ್ವಾತಂತ್ರ್ಯದಿಂದ ಆದ ಮತ್ತು ಆಗಬೇಕಾದ ಕಾರ್ಯದ ಚಿಂತನೆಯಿದೆ. ಸ್ವಾತಂತ್ರ್ಯ ಪಡೆಯಲು ಕಂಡ ಕನಸು ಕಸವಾಗಿ ಬಿಟ್ಟಿದೆ ಎಂಬ ದುಃಖದ ಮಿಡಿತವಿದೆ.

``ಕೃತಯುಗ ತೆರಳಿತು, ತ್ರೇತವು ಕೆರಳಿತು.  
ದ್ವಾಪರ ಮುಗಿದಿತು ಮಸಣದಲಿ  
ಕಲಿಯುಗ ಬಂದಿದೆ ಕಲಹವ ತಂದಿದೆ  
ವಿಜ್ಞಾನದ ಹೊಸ ತರುಣದಲಿ''

`` ಶ್ರಾವಣ ಮಾಸಕೆ ಶ್ರವಣಕೆ ಸಾರಿತು  
ಭಾರತ ಮಾತೆಯ ಹೊಸಾ ಶ್ರುತೀ  
ಜನವೇ ರಾಷ್ಟ್ರವು; ರಾಷ್ಟ್ರವೇ ಜನವು  
ಸಾರ್ವಭೌಮ ಮಾನವನ ಸ್ತುತೀ''.[9]

ಕಲಿಯುಗದಲ್ಲಿ ವಸಾಹತುಶಾಹಿ ಪ್ರಭುತ್ವ ನಾಶಕ್ಕೆ ಕಲಹವು ನಡೆದಿದೆ. ಭಾರತ ಮಾತೆಯ ಹೊಸ ಶ್ರುತಿ ಮೊಳಗಿದೆ. ಸ್ವಾತಂತ್ರ್ಯವನ್ನು ಪಡೆಯಲಾಯಿತು. ಈಗಿನ ನಮ್ಮ ರಾಷ್ಟ್ರ -` ಜನವೇ ರಾಷ್ಟ್ರ, ರಾಷ್ಟ್ರವೇ ಜನ' ಅಂದರೆ ಪ್ರಜಾಪ್ರಭುತ್ವ ವ್ಯವಸ್ಥೆ ಬಂದು ಸರ್ವಾಧಿಕಾರ ಅಂತ್ಯವಾಗಿ ಸಾರ್ವಭೌಮತೆಯನ್ನು ಮೆರೆದ ರಾಷ್ಟ್ರ ಭಾರತ.

ಭಾರತ ಸ್ವಾತಂತ್ರ್ಯ ಪಡೆದ ಮೇಲೆ ರಾಷ್ಟ್ರದ ಪ್ರಜೆಗಳ ಅಭ್ಯುದಯದ ದೃಷ್ಟಿಯಿಂದ ಹಲವಾರು ಕಾರ್ಯಕ್ರಮಗಳನ್ನು ತಂದಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ರಾಷ್ಟ್ರವು ಕೆಲವೇ ಜನರ ಸ್ವತ್ತಾಗಿತ್ತು. ಕಾನೂನು ನಿಯಮಾವಳಿಗಳು ಅವರಿಗೋಸ್ಕರ ರಚಿತವಾಗುತ್ತಿದ್ದವು. ಸರ್ವರ ಆಸೆ ಆಕಾಂಕ್ಷೆ, ಅನುಭವಗಳ ಕಡೆ ಸರ್ಕಾರ ಗಮನಹರಿಸಬೇಕು. ಮೇಲು ಕೀಳುಗಳ ನಡುವಿನ ತಾರತಮ್ಯ ಇಲ್ಲವಾಗಿ ಸರ್ವರೂ ಸಮಾನರೆಂಬ ಅರಿವು ಮೂಡುವಂತಾಗಬೇಕು.

## ಅಡಿ ಟಿಪ್ಪಣಿಗಳು

1.ಕುವೆಂಪು ಸಮಗ್ರ ಕಾವ್ಯ ಸಂಪುಟ-1; ಪುಟ-373

2. ಅದೇ.

3.ಕುವೆಂಪು;ಸಮಗ್ರಕಾವ್ಯ ಸಂಪುಟ-2; ಪುಟ-76

4.ಅದೇ.

5.ಅದೇ .. ಪುಟ-420

6.ಅದೇ.. ಪುಟ-421

7.ವಾಮನ ಬೇಂದ್ರೆ;ಅಂಬಿಕಾತನಯದತ್ತಸಮಗ್ರ ಕಾವ್ಯ;ಸಂಪುಟ -2, ಪುಟ-351

8.ಅದೇ.. ಪುಟ-346

9.ಅದೇ.. ಪುಟ-376

## ೬. ಶ್ರೀ ಸಾಮಾನ್ಯ

ಭಾರತೀಯ ಸಮಾಜ ಶ್ರೇಣೀಕೃತ ವ್ಯವಸ್ಥೆಯನ್ನು ಹೊಂದಿತ್ತು. ಸಮಾಜದಲ್ಲಿ ಒಬ್ಬ ಇನ್ನೊಬ್ಬನಿಗೆ, ಒಂದು ಮತ ಇನ್ನೊಂದು ಮತಕ್ಕೆ, ಒಂದು ಜಾತಿ ಇನ್ನೊಂದು ಜಾತಿಗೆ ಮೇಲ್ವರ್ಗವಾಗುತ್ತಾ ಹೋಗುವುದನ್ನು ಕಾಣಬಹುದು. ಇಷ್ಟೇ ಅಲ್ಲ ಒಂದೇ ಮತ, ಜಾತಿಯೊಳಗೂ ಅಂತರವಿರುತ್ತದೆ. ಹೀಗೆ ವಿಂಗಡಿಸಿದಾಗ ಅತ್ಯಂತ ತಳಭಾಗದಲ್ಲಿ ಕಂಡು ಬರುವ ಜನರನ್ನು ಶ್ರೀ ಸಾಮಾನ್ಯರೆಂದು ಸಾಮಾನ್ಯವಾಗಿ ಗುರುತಿಸಲಾಗುತ್ತದೆ. ಸಾಮಾಜಿಕ ಪರಿಸರದಲ್ಲಿ ನಿರ್ಲಕ್ಷ್ಯಕ್ಕೊಳಗಾದ ಜನ ಸಮುದಾಯದವರೇ ಶ್ರೀ ಸಾಮಾನ್ಯರು. ಇಂತಹ ಸಾಮಾನ್ಯನಿಗೆ ಸಾಹಿತ್ಯದಲ್ಲಿ ಹೆಚ್ಚು ಸ್ಥಾನವನ್ನು ಕೊಟ್ಟವರು ಕುವೆಂಪು ಅವರು. ಶ್ರೀ ಸಾಮಾನ್ಯರನ್ನು ಸಾಹಿತ್ಯದಲ್ಲಿ ವ್ಯಾಪಕವಾಗಿ ಬಳಸಿದ್ದಾರೆ. ಶ್ರೀ ಸಾಮಾನ್ಯರನ್ನು  ಹೊರತುಪಡಿಸಿ ಕೃತಿ ರಚಿಸಲು ಅವರು ಬಯಸಿದಂತೆ ಕಂಡುಬರುವುದಿಲ್ಲ. ಅವರ ಸಾಹಿತ್ಯದ ತುಂಬೆಲ್ಲಾ ಮನುಜಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣ ದೃಷ್ಟಿಗಳ ಕಲ್ಪನೆಯೇ ಮೈ ಪಡೆದಿದೆ. ಕುವೆಂಪು ಅವರು ಕಾವ್ಯದಲ್ಲಿ ಶ್ರೀ ಸಾಮಾನ್ಯನಿಗೆ ದೀಕ್ಷೆಯನ್ನು ನೀಡಿ ಎಲ್ಲಾ ಕಾಲಕ್ಕೂ ಸಾಂಸ್ಕೃತಿಕ ಮುಖಾಮುಖಿಯನ್ನುಂಟುಮಾಡಿದ್ದಾರೆ. ಸಾಮಾನ್ಯತೆ ಎನ್ನುವುದು ಭಗವಂತನ ರೀತಿ.

ಅದನ್ನೇ -

**`` ಸಾಮಾನ್ಯತೆ ಭಗವಂತನ ರೀತಿ;**

**ಸಾಮಾನ್ಯವೆ ಭಗವತ್ ಪ್ರೀತಿ**

**ರಾಜ್ಯವನುರುಳಿಸಿ ಕಟ್ಟುವ ಕೀರ್ತಿ**

**ವೈರಿಯನೆದೆ ಮೆಟ್ಟುವ ಕೀರ್ತಿ**

**ಪೊ! ತೆಗೆ! ಪೈಶಾಚಿಕ ಸ್ಫೂರ್ತಿ !**

**ಬರಿ ನೇತಿ!.**[1]

ಸಾಮಾನ್ಯತೆ ಭಗವಂತನ ರೀತಿ, ಭಗವಂತನ ಪ್ರೀತಿಯನ್ನು ಗಳಿಸುವುದು ಸಾಮಾನ್ಯವಲ್ಲ. ಸಾಮಾಜಿಕ ಜೀವನದಲ್ಲಿ ಸಾಮಾನ್ಯನು ಸಾಮಾನ್ಯನಂತೆ ಬದುಕಬೇಕಾದ ಅನಿವಾರ್ಯತೆಯನ್ನು, ಹಾಗೆ ಬದುಕುವುದರಿಂದ ಆತ ಪಡೆಯುವ ಆದರ, ಅದು ದೇವರ ಪ್ರೀತಿ. ಸರ್ವಾಧಿಕಾರ ರಾಜ್ಯವನ್ನು ಉರುಳಿಸಿ, ವೈರಿಯ ಎದೆಯನ್ನು ಮೆಟ್ಟಿ ನಿಲ್ಲಲ್ಲು ಹವಣಿಸುವ ಸಾಮಾನ್ಯ ಪ್ರಭುತ್ವವನ್ನು ನಿರಾಕರಿಸುತ್ತಾನೆ. ಅವನ ಬದುಕು ಭಗವಂತನ ಬದುಕಿನಂತೆ. ಇಂತಹ ಸಾಮಾನ್ಯನ ಸಂಪತ್ತು ತೆಂಗಿನ ಹೂ, ತೆರಗೆಲೆ, ಹುಡಿಧೂಳು, ಕಲ್ಲು, ಮಣ್ಣು, ಚಿಟ್ಟೆ ಇವು ಸರ್ವೋತ್ತಮನ ಸಂಪತ್ತೂ ಹೌದು. ಇಲ್ಲಿ ಸಾಮಾನ್ಯನನ್ನು ಭಗವಂತನಿಗೆ ಹೋಲಿಸಿದ್ದಾರೆ. ಸಂಪತ್ತನ್ನು ಗಣಿಯಲ್ಲಿ ಹುಡುಕುವುದಲ್ಲ. ಅದೆಲ್ಲವನ್ನು ಭಗವಂತ ಸಾಮಾನ್ಯರಿಗೆ ಕೊಟ್ಟಿದ್ದಾನೆ. ಸಾಮಾನ್ಯರ ಬಳಿಯೇ ಸರ್ವೋತ್ತಮನ ಸಂಪತ್ತಿರುವುದು.

ಕ್ರಿ.ಶ. ೧೯೫೦ನೆಯ ಜನವರಿ ೨೬ ನೆಯ ಗುರುವಾರ ಭಾರತವು ಸರ್ವ ಪ್ರಜಾಧಿಪತ್ಯವನ್ನು ಘೋಷಿಸಿದ ಸಂದರ್ಭದಲ್ಲಿ ರಚನೆಗೊಂಡ ಕವಿತೆ `ಶ್ರೀ ಸಾಮಾನ್ಯರ ದೀಕ್ಷಾಗೀತೆ' ಸರ್ವ ಪ್ರಜಾಧಿಪತ್ಯವು ಸ್ಥಾಪನೆಯಾದ ನಂತರ ದೇಶಕ್ಕೊದಗಬಹುದಾದ ಸೌಲಭ್ಯ

ಸೌಕರ್ಯಗಳ ಬಗ್ಗೆ ಅವರು ತಮ್ಮದೇ ಆದ ಜಗತ್ತೊಂದನ್ನು ನಿರ್ಮಿಸಿಕೊಂಡಿದ್ದಾರೆ.

`` ಶ್ರೀ ಸಾಮಾನ್ಯ'ವೆ ಭಗವಾನ್ ಮಾನ್ಯಂ;

ಶ್ರೀಸಾಮಾನ್ಯನೆ ಭಗವದ್ ಧನ್ಯಂ!''

ಈ ಎರಡು ಸಾಲುಗಳು ಇಡೀ ಕವಿತೆಯ ಒಟ್ಟು ಸಾರಾಂಶದಂತಿದೆ. ಸಾಮಾನ್ಯನೇ ಮುಖ್ಯ. ಸಾಮಾನ್ಯ ಎನ್ನುವುದು ಭಗವಂತನಿಗೆ ಪ್ರಿಯವಾದುದು ಮತ್ತು ಭಗವಂತನೇ ಮಾನ್ಯ ಮಾಡುದುದು, ಮಾಡಬೇಕಾದುದು. ಹಾಗಾದಾಗ ಸಾಮಾನ್ಯ ಭಗವಂತನಿಂದ ಧನ್ಯನಾಗುತ್ತಾನೆ. ಅಂತೆಯೇ ಭಗವಂತ ಸಾಮಾನ್ಯನ ಬಳಿ ಬಂದು ಧನ್ಯನಾದ. ಇವೆಲ್ಲ ಕವಿ ಅಸಾಮಾನ್ಯತೆಯನ್ನು ತಿರಸ್ಕರಿಸುತ್ತಲೇ ಸಾಮಾನ್ಯತೆಯನ್ನು ಪ್ರತಿಷ್ಠಾಪಿಸಿದ್ದಾರೆ.

``ಸರ್ವರಿಗಾಗಿಯೆ ಸರ್ವವ ತನ್ನಿಂ!

`ಸರ್ವರನೆನಗೆ! ಸರ್ವಂಗೆನ್ನಿಂ!

ಸರ್ವರಿಗಾಗಿಯೆ ಸರ್ವಂ!' ಎನ್ನಿಂ;

ಓ ಬನ್ನಿಂ, ಓ ಬನ್ನಿಂ

ಸಾಮಾನ್ಯದ ಪೂಜೆಗೆ ಶ್ರೀದೀಕ್ಷೆಯ ಕೊಳ್ಳಿಂ!''[2]

ಸಾಮಾನ್ಯತೆಗೆ , ಸರಳತೆಗೆ ಸಿದ್ಧಾಂತಗಳು ಬೇಕಾಗಿಲ್ಲ. ಸಮಾನತೆ, ಸಮತಾವಾದದ ಅಡಿಗಲ್ಲಿನಲ್ಲಿಯೇ ಸಾಮಾನ್ಯತೆಯ ತತ್ವರೂಪಿತವಾಗಿದೆ. ಹಾಗಾಗಿ ಇದು ಸರ್ವರಿಗಾಗಿಯೇ ಬಂದ ಸಮಯ ಸರ್ವರೂ ಸಾಮಾನ್ಯರಾಗುವ ದೀಕ್ಷೆಯನ್ನು ಪಡೆದು ಭಗವಂತನ ಪ್ರೀತಿಗೆ ಅರ್ಹರಾಗಿ ಎನ್ನುತ್ತಾರೆ.

ದೀನ ದಲಿತರ ಉದ್ಧಾರವೇ ಭಗವಂತನಿಗೆ ಅತ್ಯಂತ ಪ್ರಿಯವಾದ ವಿಷಯವೆಂಬ ತಿಳುವಳಿಕೆ ಪ್ರಾಚೀನ ಕಾಲದಿಂದಲೂ ಇದ್ದರೂ `ಸಾಮಾನ್ಯತೆ ದಿಟಭಗವತ್ ಪ್ರೀತಿ' ಎಂಬ ಸತ್ಯವನ್ನು ದೇಶ ಕಾಲಾತೀತವಾಗಿ ಎಲ್ಲರೂ ಮಾನ್ಯ ಮಾಡುತ್ತಾರೆ, ಪುರಸ್ಕರಿಸುತ್ತಾರೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಆದ್ದರಿಂದಲೇ ಸರ್ವರಿಗಾಗಿಯೇ ಸರ್ವಂ ಎನ್ನಿಂ. ಸಾಮಾನ್ಯದ ಪೂಜೆಗೆ ಶ್ರೀ ದೀಕ್ಷೆಯ ಕೊಳ್ಳಿಂ ಎಂದು ಪ್ರಜಾರಾಜ್ಯ ಘೋಷಣೆಯಾದ ಶುಭ ಸಂದರ್ಭದಲ್ಲಿ ಕವಿ ಈ ರೀತಿ ಕರೆದಿದ್ದಾರೆ.

`` ಸರ್ವೋದಯ ! ಸರ್ವೋದಯ

ಸರ್ವೋದಯ ಯುಗ ಮಂತ್ರ!

ಸರ್ವೋದಯವೇ ಸ್ವಾತಂತ್ರ್ಯದ ಶ್ರೀ ತಂತ್ರ!

ಮೇಲಿಲ್ಲವೊ ಕೀಳಿಲ್ಲವೊ

ಸರ್ವಸಮಾನದ ರಾಜ್ಯ

ಅಧ್ಯಕ್ಷನೊ ಸೇನಾನಿಯೋ

ಕಮ್ಮಾರನೊ ಚಮ್ಮಾರನೊ

ಕಾಯಕವೆಲ್ಲವು ಪೂಜ್ಯ!''[3]

ಸ್ವಾತಂತ್ರ್ಯವೆಂಬುದು ಕೇವಲ ಕೆಲವೇ ಜನರ ಸ್ವತ್ತಲ್ಲ. ಬಲಶಾಲಿಗಳಿಗೆ, ಶ್ರೀಮಂತರಿಗೆ ಮಾತ್ರವಲ್ಲ ಸಾಮಾನ್ಯರಿಗೂ ಸೇರಿದ್ದು, ಸ್ವಾತಂತ್ರ್ಯ ಬಂದಾಗಲೇ ಕೊನೆಗೊಂಡಿದೆ ಓರ್ಒರ್ವರ ಕಾಲ, ಇದು ಸರ್ವರ ಕಾಲ ಎಂದು ಕರೆ ನೀಡಿದ್ದಾರೆ. ಸರ್ವರ ಕಾಲದಲ್ಲಿ ಸರ್ವರ ಆಸೆ ಆಕಾಂಕ್ಷೆ, ಅಭ್ಯುದಯದ ಕಡೆ ಸರ್ಕಾರ ಗಮನ ಹರಿಸಬೇಕು. ಮೇಲು-ಕೀಳುಗಳ ನಡುವಿನ ತಾರತಮ್ಯ ಇಲ್ಲವಾಗಿ ಸರ್ವರು ಸಮಾನರೆಂಬ ಅರಿವು ಮೂಡುವಂತಾಗಬೇಕು. ಅಧ್ಯಕ್ಷ, ಸೇನಾನಿ, ಕಮ್ಮಾರ, ಚಮ್ಮಾರ ಈ ಯಾವುದೇ ಪದವಿಗಳಲ್ಲಿ ಇದ್ದರೂ ಅಲ್ಲೆಲ್ಲ ಕಾಯಕ ಪೂಜ್ಯವಾಗಬೇಕು. ಅಂದರೆ ಕವಿಯ ಕಲ್ಪನೆಯ ರಾಜ್ಯ ಇಂದು ಅಧಿಕಾರ, ಪದವಿಗಳ ಮೇಲೆ ಕಾಯಕ ಯೋಗ್ಯ-ಅಯೋಗ್ಯ ಎಂಬುದು ಬಂದು ತನ್ನ ಮಹತ್ವವನ್ನು ಕಳೆದುಕೊಂಡಿದೆ.

`` ಭಗವಂತನೆ ಸರ್ವೋತ್ತಮ ಸಾಮಾನ್ಯನ್;

ಸಾಮಾನ್ಯನೆ ಸರ್ವೋತ್ತಮ ಶ್ರೀಮಂತನ್!

ಆತನೆ ಒರ್ವನ್, ಆತನೆ ಸರ್ವನ್''.[4]

ಭಗವಂತನನ್ನು ಸರ್ವೋತ್ತಮ ಎನ್ನುವುದಾದರೆ ಆತನೆ ಸಾಮಾನ್ಯನು ಆತನೆ ಒರ್ವನ್, ಆತನೆ ಸರ್ವನ್, ಆತನೆ ಶ್ರೀ ಸಾಮಾನ್ಯನು. ಈ ಶ್ರೀ ಸಾಮಾನ್ಯನು ಕೋಪಗೊಂಡಂರೆ ಏನಾಗುತ್ತಾನೆಂಬುದನ್ನು ಕಲ್ಕಿ ರೂಪದಲ್ಲಿ ವಿವರಿಸಿದ್ದಾರೆ.

``ಬಲಗಡೆ ಕೈಯಲಿ ಮಿಂಚಿನ ಕತ್ತಿ!

ಎಡಗಡೆ ಕೈಯಲಿ ಸಿಡಿಲಿನ ಬುತ್ತಿ!

ಎಲುಬಿನ ಕುದುರೆ! ಎಲುಬಿನ ಆಳು!

ಇವನೆಯೆ ಕಲ್ಕಿ? ಬಡವರ ಬಾಳು?

ಮೂರ್ತಿವೆತ್ತಿಹ ಬಡವರ ಗೋಳು!''[5]

ಸಾಮಾನ್ಯನ ಸಹನೆಯು ಮಿತಿಮೀರಿದಾಗ ಕಲ್ಕಿಯ ರೂಪವನ್ನು ಧರಿಸುತ್ತಾನೆ. ಬಡವರ ಗೋಳಿನ ಮೂರ್ತಿಯಾಗಿರುವ ಕಲ್ಕಿ ಹೋರಾಟದ ಸ್ವರೂಪವನ್ನು ತಾಳಿರುವುದನ್ನು ಚಿತ್ರಿಸಿದ್ದಾರೆ.

``ತಿಂದನು ತಲೆಗಳ ತೆಗೆತೆಗೆದು!

ಎಲುಬಿನ ಕುದುರೆಯು ಕೆನೆಯುತ್ತಿತ್ತು ;

ನಾದವು ಬೊಮ್ಮವ ಬರಿವಂತಿತ್ತು!

ಎಲುಬಿನ ಮೂರ್ತಿಯು ಗಹಗಹಿಸಿತ್ತು ;

ಗುಡುಗಿನ ಮಾಲೆಯೊ ಪೊರಮಡುತಿತ್ತು !''[6]

ಆಕ್ರೋಶಗೊಂಡ ಕಲ್ಕಿ ಶ್ರೀಮಂತರನ್ನು ಕೊಂದು ಗಹಗಹಿಸಿ ನಗುವಾಗ ಉಳ್ಳವರು ಏನೂ ಮಾಡಲಾಗದೆ ಹಿಂದಿರುಗುತ್ತಾರೆ. ಇದರಿಂದ ಎಲುಬಿನ ಪ್ರಾಣಿಯಂತಿರುವ ಶ್ರೀ ಸಾಮಾನ್ಯನು ಕಲ್ಕಿಯ ರೂಪವನ್ನು ತಾಳುವ ಮುನ್ನ ಧನಿಕರು ತಮ್ಮ ಅಹಂಕಾರದ

ಪೊರೆಯನ್ನು ಕಳಚಿ ಶಾಂತರೂಪವನ್ನು ತಾಳಲು ಸೂಚಿಸುತ್ತಾರೆ.

ಶ್ರೀ ಸಾಮಾನ್ಯನ ಬದುಕಿಗೆ ಪ್ರಾಮಾಣಿಕವಾಗಿ ಸ್ಪಂದಿಸಿದ ಮತ್ತೊಬ್ಬ ನವೋದಯ ಕವಿ ಬೇಂದ್ರೆಯವರು. ಬಡತನ, ದುಃಖ, ದಾರಿದ್ರ್ಯಗಳಿಂದ ನರಳುತ್ತಿರುವ ಶ್ರೀ ಸಾಮಾನ್ಯ ಮೇಲೇಳಬೇಕು ಎಂಬ ಹಂಬಲ ಅವರ ಅನೇಕ ಕಾವ್ಯಗಳಲ್ಲಿ ಮೂಡಿವೆ.

`` ನಾನು ಬಡವಿ ಆತ ಬಡವ

ಒಲವೆ ನಮ್ಮ ಬದುಕು

ಬಳಸಿಕೊಂಡೆವದನೆ ನಾವು

ಅದಕು ಇದಕು ಎದಕು''.

''ಕುಂದು ಕೊರತೆ ತೋರಲಿಲ್ಲ

ಬೇಕು ಹೆಚ್ಚಿಗೇನು?

ಹೊಟ್ಟೆಗಿತ್ತ ಜೀವ ಫಲವ

ತುಟಿಗೆ ಹಾಲುಜೇನು''.[7]

ಒಲವಿನ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತಾ ಪ್ರೀತಿಯೇ ಸರ್ವಸ್ವ ಎಂಬುದನ್ನು ಶ್ರೀ ಸಾಮಾನ್ಯನ ಮೂಲಕ ತಿಳಿಸಿದ್ದಾರೆ. ಅಸಾಧಾರಣ ಪ್ರೀತಿಯ ಹೊನಲಿನಲ್ಲಿರುವ ದಂಪತಿಗಳಿಗೆ ಅವರ ಅಪೂರ್ವ ಜಗತ್ತು ಪ್ರೀತಿಯೇ. ಅಲ್ಲಿ ಯಾವುದೇ ಭೌತಿಕ ವಸ್ತುಗಳಿಗೆ ಬೆಲೆ ಇರುವುದಿಲ್ಲ. ಅವೆಲ್ಲವೂ ಅರ್ಥಹೀನವಾಗಿ ಕಂಡು ಪ್ರೀತಿಯೇ ಬಂಗಾರದ ಕಡಲಾಗಿ ಪರಿಣಮಿಸಿರುವುದನ್ನು ಕಾಣಬಹುದು. ಬಡತನದ ಬೇಗೆಯಲ್ಲಿರುವ ಸಾಮಾನ್ಯ ದಂಪತಿಗಳು ಪ್ರೀತಿಯಿಂದಲೇ ಬದುಕಿನ ಸಾರ್ಥಕ್ಯವನ್ನು ಪಡೆಯುತ್ತಾರೆನ್ನುವುದನ್ನು ತೋರಿಸಿದ್ದಾರೆ.

ಸಿರಿವಂತ ಪ್ರಪಂಚದ ನರ್ತನ ರೂಪವನ್ನು ಮಾರ್ಮಿಕವಾಗಿ `ಕುರುಡು ಕಾಂಚಾಣ' ಕವಿತೆಯಲ್ಲಿ ಚಿತ್ರಿಸಿದ್ದಾರೆ.

`ಕುರುಡು ಕಾಂಚಾಣ ಕುಣಿಯುತಲಿತ್ತೋ

ಕಾಲಿಗೆ ಬಿದ್ದವರ ತುಳಿಯುತ್ತಲಿತ್ತೋ ''

ಸಾಮಾನ್ಯ ಜನತೆಯನ್ನು ಕಾಂಚಾಣವೆಂಬುದು ತುಳಿಯುತ್ತಿದೆ. ಉಳ್ಳವರು ಸಾಮಾನ್ಯರ ಮೇಲೆ ನರ್ತಿಸುತ್ತಿದ್ದಾರೆ. ಇಡೀ ಅರ್ಥ ವ್ಯವಸ್ಥೆಯ ಆಧಾರ ಸ್ತಂಭವನ್ನೇ ತುಳಿಯುತ್ತಿರುವಂತೆ ಗೋಚರಿಸುತ್ತದೆ. ಸಾಮಾನ್ಯನ ಬಾಳಿನಲ್ಲಿ ಹಣದ ಪಾತ್ರವನ್ನು ಪ್ರತಿಮೆಗಳ ಮುಖಾಂತರ ನಿರ್ವಹಿಸುತ್ತಾರೆ.

``ಬಾಣಂತಿ ಎಲುಬು ಸಾಬಾಣದ ಬಿಳುಪಿನ

ಕಾಣದ ಕಿರುಗಜ್ಜೆ ಕಾಲಾಗೆ ಇತ್ತೋ

ಸಣ್ಣ ಕಂದಮ್ಮಗಳ ಕಣ್ಣಿನ ಕವಡೀಯ

ತಣ್ಣನೆ ಜೋಮಾಲೆ ಕೊರಳೊಳಗಿತ್ತೋ''.[8]

ಹೀಗೆ ಸಾಗುವ ಕವನ ಪುಂಖಾನುಪುಂಖವಾಗಿ ವಿವಿಧ ಪ್ರತಿಮೆಗಳನ್ನು ಬಳಸಿ, ಒಂದು ವಸ್ತುವಿನ ಹಲವಾರು ರೂಪುಗಳು

ಕಾವ್ಯದಲ್ಲಿ ಧ್ವನಿಪೂರ್ಣತೆ ಪಡೆದಿವೆ. ಕಣ್ಣಿಲ್ಲದ ಹಣ ಹೆಂಗಸರನ್ನು ಮಕ್ಕಳನ್ನು ಅಷ್ಟೇ ಏಕೆ ಎಲ್ಲರನ್ನು ತುಳಿಯುತ್ತಾ, ನೋವಿಗೀಡು ಮಾಡುತ್ತಾ, ಯುಗ-ಯುಗ ಮುಗಿದರೂ, ಅದರ ನರ್ತನ ನಿಲ್ಲದೆ ನಿರಂತರ ನಡೆದಿದೆ ಎಂಬ ರೌದ್ರರೂಪವನ್ನು ಕವಿತೆ ನಿಚ್ಚಳವಾಗಿ ಬಿತ್ತರಿಸಿದೆ.

`ಮನುವಿನ ಮಕ್ಕಳು' ಎಂಬ ಪದ್ಯದಲ್ಲಿ ಸಾಮಾನ್ಯರ ಸಾಮಾಜಿಕ ಅನ್ಯಾಯದ ವಿಷಮತೆಯನ್ನು ಕುರಿತು-

**`` ದುಡಿವರ ಉಸಿರಿಗೆ ದಣಿವಿಲ್ಲ ಕೊನೆಗೂ ತಣಿವಿಲ್ಲ**

**ಕೂಸುಗಳಾಟಕೆ ಕಳೆಯಿಲ್ಲ ಭೂಮಿಗೆ ಬೆಳೆಯಿಲ್ಲ**

**ಹೆಣ್ಣಿನ ಕಂಬನಿ ತೋಡಿದ್ದಿಲ್ಲ ಗಂಡಿಗೆ ಬಿಡುವಿಲ್ಲ''**[೧]

ಸಾಮಾನ್ಯನ ಬದುಕಿನ ದುಃಸ್ಥಿತಿಯ ಗಂಭೀರ ದೃಶ್ಯಗಳಿಗೆ ಬೇಂದ್ರೆಯವರು ನುಡಿ ಕೊಟ್ಟಿದ್ದಾರೆ.

## ಅಡಿ ಟಿಪ್ಪಣಿಗಳು

1. ಕುವೆಂಪು ಸಮಗ್ರ ಕಾವ್ಯ;ಸಂಪುಟ-2; ಪುಟ-75

2. ಅದೇ. ಪುಟ-76

3. ಅದೇ.

4.ಅದೇ.

5.ಅದೇ. ಸಂಪುಟ-2; ಪುಟ-168

6.ಅದೇ.. ಪುಟ-169

7. ವಾಮನ ಬೇಂದ್ರೆ;ಅಂಬಿಕಾತನಯದತ್ತ ಸಮಗ್ರ ಕಾವ್ಯ;ಸಂಪುಟ-2; ಪುಟ-69

8.ಅದೇ.. ಸಂಪುಟ -4;ಪುಟ-105

9.ಅದೇ.. ಪುಟ-101

**೭. ಭಾಷಾ ಚಳವಳಿ**

೧೯ನೇ ಶತಮಾನದ ಅಂತಿಮ ಭಾಗ ಮತ್ತು ೨೦ನೆಯ ಶತಮಾನದ ಮೊದಲರ್ಧ ಭಾಗದಲ್ಲಿ ಕರ್ನಾಟಕದಲ್ಲಿ ನಡೆದ ಮಹತ್ವ ಪೂರ್ಣ ಚಳವಳಿಗಳೆಂದರೆ ಒಂದು ಭಾರತದ ಸ್ವಾತಂತ್ರ್ಯ ಚಳವಳಿ, ಮತ್ತೊಂದು ಕರ್ನಾಟಕದ ಏಕೀಕರಣ ಚಳವಳಿ. ಈ ಎರಡರ ಧ್ಯೇಯೋದ್ದೇಶಗಳು ಭಿನ್ನವಾದರೂ ಅವುಗಳು ನಡೆದುದು ಒಂದೇ ಕಾಲದಲ್ಲಿ ಮತ್ತು ಒಂದಕ್ಕೊಂದು ಪೂರಕವಾಗಿಯೇ ನಡೆದವು. ಪರರ ದಾಸ್ಯದಿಂದ ಸ್ವತಂತ್ರವಾಗಿ ಬಾಳುವ ಇಚ್ಛೆ ಒಂದೆಡೆಯಾದರೆ, ಹರಿದು ಹಂಚಿಹೋಗಿದ್ದ ಕನ್ನಡವನ್ನು ಮತ್ತು ಕನ್ನಡ ಜನತೆಯನ್ನು ಒಂದೇ ಆಡಳಿತದಡಿ ನೆಲೆಗೊಳಿಸಬೇಕೆಂಬುದು ಮತ್ತೊಂದೆಡೆ ಬಿರುಸಿನಿಂದ ನಡೆಯುತ್ತಿತ್ತು.

ಕರ್ನಾಟಕವನ್ನು ಆಳಿದ ಗಂಗರು, ಚಾಲುಕ್ಯರು, ರಾಷ್ಟ್ರಕೂಟರು, ಹೊಯ್ಸಳರು ಮತ್ತು ವಿಜಯನಗರದ ಅರಸರು ಕರ್ನಾಟಕಕ್ಕೆ ರಾಜಕೀಯ ಐಕ್ಯತೆ ಮತ್ತು ರಾಜಕೀಯ ಭವ್ಯತೆಯನ್ನು ದೊರಕಿಸಿಕೊಟ್ಟಿದ್ದರು. ಆದರೆ ಕಾಲಕ್ರಮದಲ್ಲಿ ಕರ್ನಾಟಕ ರಾಜಕೀಯವಾಗಿ ಛಿದ್ರಛಿದ್ರವಾಗಿ ಒಡೆದು ಅನೈಕ್ಯತೆಯ ಬೀಡಾಯಿತು. ಭಾರತವನ್ನು ಹಂತ ಹಂತವಾಗಿ ಆಕ್ರಮಿಸುತ್ತಾ ಬಂದ ಬ್ರಿಟಿಷರು ಭಾರತದ ರಾಜಕೀಯವನ್ನು ಪ್ರವೇಶಿಸಿದರು ಹಾಗೂ ಕರ್ನಾಟಕದ ಐಕ್ಯತೆಗೆ ಧಕ್ಕೆಯನ್ನಂಟು ಮಾಡಿದರು. ಇದರ ಪರಿಣಾಮವಾಗಿ ಕರ್ನಾಟಕ ಪ್ರದೇಶಗಳು ಹಂಚಿ ಹೋದವು. ಮೈಸೂರು ರಾಜ್ಯವು ಸೇರಿದಂತೆ ಹಲವಾರು ಸಣ್ಣ ಪುಟ್ಟ ಸಂಸ್ಥಾನಗಳು ಏರ್ಪಟ್ಟು ಸ್ವತಂತ್ರ ರಾಜರ ಆಳ್ವಿಕೆಗೆ ಒಳಗಾದವು. ಕರ್ನಾಟಕದ ಅನೇಕ ಪ್ರದೇಶಗಳು ಬೊಂಬಾಯಿ ಮತ್ತು ಮದ್ರಾಸ್ ಪ್ರಾಂತ್ಯಗಳಲ್ಲಿಯೂ ಹೈದರಾಬಾದ್ ಸಂಸ್ಥಾನದಲ್ಲಿಯೂ ಸೇರಿಹೋದವು. ಬೊಂಬಾಯಿ ಪ್ರಾಂತದ ಎಲ್ಲ ಶಾಲೆಗಳಲ್ಲಿ ಮರಾಠಿ ಶಿಕ್ಷಣ ಜಮಖಂಡಿ ಮತ್ತು ಮುಧೋಳ ಸಂಸ್ಥಾನಗಳಲ್ಲಿ ಮರಾಠಿ ರಾಜರು ಆಳುತ್ತಿದ್ದು, ಅಲ್ಲೂ ಮರಾಠಿಯೆ ಇದ್ದು ಕನ್ನಡಕ್ಕೆ ಸ್ಥಾನವೇ ಇರಲಿಲ್ಲ. ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಾದ ಬೀದರ್, ರಾಯಚೂರು ಮತ್ತು ಗುಲ್ಬರ್ಗಗಳಲ್ಲಿ ಉರ್ದು, ಶಿಕ್ಷಣ ಮತ್ತು ಆಡಳಿತದ ಮಾಧ್ಯಮವಾಗಿದ್ದು, ಕನ್ನಡ ಮೂಲೆ ಗುಂಪಾಗಿತ್ತು. ಶಿಕ್ಷಣ ತಜ್ಞ ಡೆಪ್ಯೂಟಿ ಚನ್ನಬಸಪ್ಪನಂತಹವರು ೧೮೬೦ ರಲ್ಲಿ ಕನ್ನಡದ ಮೇಲಿನ ಪ್ರೀತಿಯಿಂದಾಗಿ ಕನ್ನಡ ಶಾಲೆಗಳನ್ನು ಸ್ಥಾಪಿಸಿ ಕನ್ನಡಿಗರಿಗೆ ಕನ್ನಡ ಶಿಕ್ಷಣ ದೊರೆಯುವಂತೆ ಮಾಡಿದರು. ಕನ್ನಡಿಗರು ಮೈಸೂರು ರಾಜ್ಯವನ್ನು ಬಿಟ್ಟರೆ ಎಲ್ಲೆಡೆ ಅಲ್ಪ ಸಂಖ್ಯಾತರಾಗಿದ್ದು, ಅನ್ಯ ಭಾಷಿಕರ ದಬ್ಬಾಳಿಕೆಗೆ ಒಳಗಾದರು. ಇದು ಕನ್ನಡಿಗರಲ್ಲಿ ಸ್ವಾತಂತ್ರ್ಯ ಮತ್ತು ಐಕ್ಯತೆಯ ಭಾವನೆಗಳನ್ನು ಮೂಡಿಸಿದವು. ಕನ್ನಡ ಜನ ಒಂದಾಗಬೇಕು, ಕನ್ನಡ ನಾಡು ಐಕ್ಯಗೊಳ್ಳಬೇಕು ಎಂಬುದು ಅವರ ತುಡಿತವಾಗಿತ್ತು. ಡೆಪ್ಯೂಟಿ ಚನ್ನಬಸಪ್ಪ, ಆಲೂರು ವೆಂಕಟರಾಯ, ಹರ್ಡೇಕರ್ ಮಂಜಪ್ಪ, ಗಂಗಾಧರರಾವ್ ದೇಶಪಾಂಡೆ, ಎನ್.ಎಸ್.ಹರ್ಡೀಕರ್, ಟಿ.ಸಿದ್ದಲಿಂಗಯ್ಯ, ಕೆ.ಟಿ.ಭಾಷ್ಯಂ, ಎಸ್.ನಿಜಲಿಂಗಪ್ಪ, ಕೆ.ಹನುಮಂತಯ್ಯ ಮೊದಲಾದವರು ಕರ್ನಾಟಕದ ಏಕೀಕರಣ ಚಳವಳಿಯಲ್ಲಿ ಸಕ್ರೀಯವಾಗಿ ಭಾಗವಹಿಸಿದರು. ಇದರ ಪರಿಣಾಮವಾಗಿ ಭಾಷಾವಾರು ಪ್ರಾಂತ್ಯ ವಿಂಗಡನೆಯ ತೀರ್ಮಾನದಂತೆ ಕನ್ನಡ ಮಾತನಾಡುವ ಬಹುತೇಕ ಪ್ರದೇಶಗಳು ಒಂದುಗೂಡಿ ಕರ್ನಾಟಕ ರಾಜ್ಯ

ಅಂದರೆ ಮೈಸೂರು ರಾಜ್ಯ ೧೯೫೬ರ ನವೆಂಬರ್ ೧೦ ರಂದು ಅಸ್ತಿತ್ವಕ್ಕೆ ಬಂತು. ಇದರಿಂದಾಗಿ ಕನ್ನಡಿಗರೆಲ್ಲ ಒಂದುಗೂಡಿ ಒಂದೇ ಆಡಳಿತ ವ್ಯವಸ್ಥೆಯಲ್ಲಿರುವಂತಾಯಿತು. ಆದರೂ ಕನ್ನಡ ಮಾತನಾಡುವ ಇನ್ನು ಕೆಲವು ಪ್ರದೇಶಗಳು ನೆರೆಯ ರಾಜ್ಯಗಳಲ್ಲಿ ಉಳಿದು ಹೋದವು. ಐಕ್ಯಗೊಂಡ ಮೈಸೂರು ರಾಜ್ಯವನ್ನು ಕರ್ನಾಟಕ ಎಂದು ಹೆಸರಿಡಬೇಕೆಂಬುದು ರಾಜ್ಯದ ಬಹುಪಾಲು ಜನತೆಯ ಒತ್ತಾಸೆಯಾಗಿತ್ತು. ಈ ಒತ್ತಾಸೆಗೆ ಮಣಿದು ೧೯೭೩ ರ ನವೆಂಬರ್ ೧ ರಂದು ಈ ರಾಜ್ಯಕ್ಕೆ ಅಧಿಕೃತವಾಗಿ ಕರ್ನಾಟಕವೆಂದು ನಾಮಕರಣ ಮಾಡಲಾಯಿತು.

ನವೋದಯ ಕವಿಗಳಿಗೆ ಸ್ವಾತಂತ್ರ್ಯ ಆಂದೋಲನ ಅವರ ಕಾವ್ಯಕ್ಕೆ ಪ್ರೇರಣೆಯನ್ನು ಒದಗಿಸಿದಂತೆಯೇ ಭಾಷಾ ಚಳವಳಿಯೂ ಸ್ಫೂರ್ತಿಯ ಕೇಂದ್ರವಾಗಿದೆ. ಕನ್ನಡ ಭಾಷಾಭಿಮಾನಿಗಳಾದ ಕನ್ನಡ ಕವಿಗಳ ಹೃದಯದಲ್ಲಿ ಕನ್ನಡಾಭಿಮಾನ ಪೂರಿತವಾದ ಕಾವ್ಯ ನಿರರ್ಗಳವಾಗಿ ಹರಿದಿದೆ. ಹುಯಿಲಗೋಳ ನಾರಾಯಣರಾಯ, ಹಟ್ಟಿಯಂಗಡಿ ನಾರಾಯಣರಾಯ, ಬಿಎಂಶ್ರೀ, ಗೋವಿಂದಪೈ, ಪಂಜೆಮಂಗೇಶರಾಯರು, ಕುವೆಂಪು, ಬೇಂದ್ರೆ, ಶಾಂತಕವಿ ಮೊದಲಾದವರು ಕನ್ನಡ ನಾಡು-ನುಡಿಯ ಸಾಂಸ್ಕೃತಿಕ ವೈಭವವನ್ನು , ಅದರ ಮಾಧುರ್ಯವನ್ನು ವಿಸ್ತಾರವಾಗಿ ವಿಸ್ತರಿಸಿ ಹೇಳಿದ್ದಾರೆ.

೧೯೨೪ ರಲ್ಲಿ ಬೆಳಗಾವಿಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದ ವೇದಿಕೆಯಲ್ಲಿ ಸ್ವಾಗತ ಗೀತೆಯಾಗಿ ಹುಯಿಲಗೋಳ ನಾರಾಯಣರಾಯರವರ

``ಉದಯವಾಗಲಿ ನಮ್ಮ ಚೆಲುವ ಕನ್ನಡನಾಡು<br>
ಬದುಕು ಬಲುಹಿನ ನಿಧಿಯು ಸದಭಿಮಾನದ ಗೂಡು''

ಕನ್ನಡಿಗರ ಮನದಲ್ಲಿ ಅಚ್ಚಳಿಯದೆ ಉಳಿದಿರುವ ಈ ಸಾಲುಗಳಲ್ಲಿರುವ ಅರ್ಥ ಕನ್ನಡಿಗರ ಸಾಂಸ್ಕೃತಿಕ ಬದುಕನ್ನೇ ಕಟ್ಟಿಕೊಡುತ್ತದೆ. ನಮ್ಮ ನಾಡು ಚೆಲುವಾದುದು. ಚೆಲುವಾದ ಕನ್ನಡ ನಾಡ ಉದಯವಾಗಬೇಕು. ನಮ್ಮ ಈ ಕನ್ನಡ ನಾಡು ಸದಾ ಅಭಿಮಾನದ ಗೂಡು, ಒಳ್ಳೆಯ ಅಭಿಮಾನಗಳನ್ನು ಹೊಂದಿರುವ ನಾಡು.

ಬಹುಭಾಷಾ ಪಂಡಿತರಾಗಿದ್ದ ಗೋವಿಂದಪೈ ಅವರ ನಾಡುನುಡಿಯ ಪ್ರೇಮ ಅದ್ಭುತವಾದುದು-

``ತಾಯೆ ಬಾರ, ಮೊಗವ ತೋರ, ಕನ್ನಡಿಗರ ಮಾತೆಯೆ!<br>
ಹರಸು ತಾಯೆ, ಸುತರ ಕಾಯೆ, ನಮ್ಮ ಜನ್ಮದಾತೆಯೆ!<br>
ನಮ್ಮ ತಪ್ಪನೆನಿತೊ ತಾಳ್ವೆ,<br>
ಅಕ್ಕರೆಯಿಂದೆಮ್ಮ ನಾಳ್ವೆ,<br>
ನೀನೆ ಕಣಾ ನಮ್ಮ ಬಾಳ್ವೆ,<br>
ನಿನ್ನ ಮರೆಯಲಮ್ಮೆವು,<br>
ತನು ಕನ್ನಡ, ಮನ ಕನ್ನಡ, ಧನ ಕನ್ನಡದೆಮ್ಮವು''.

ಒಂದು ಭಾಷೆಯನ್ನಾಡುವ ಜನ ಒಂದಾಗಬೇಕಾದ ಅಗತ್ಯವನ್ನು ಮನಗಂಡು ಕನ್ನಡ ತಾಯನ್ನು ತಾಯೆ ಬಾರ ಮೊಗವ ತೋರ ಕನ್ನಡಿಗರ ಮಾತೆಯೆ ಎಂದು ಪ್ರಾರ್ಥಿಸುತ್ತಾರೆ. ತಾಯಿ ತನ್ನ ಮಕ್ಕಳನ್ನು ಅಕ್ಕರೆಯಿಂದ ಕಾಣುವ ರೀತಿ, ನಮ್ಮ ಕನ್ನಡ ಮಾತೆಯು ನಮ್ಮ ತಪ್ಪುಗಳನ್ನು ಮನ್ನಿಸಿ ಪ್ರೀತಿಯಿಂದ ಬಾಳ್ವೆ ನಡೆಸಲು ಕರುಣೆ ತೋರಿಸುತ್ತಾಳೆ. ಆದ್ದರಿಂದ ತಾಯಿ ನಿನ್ನನ್ನು ಮರೆತು ಜೀವಿಸಲಾರೆವು, ನಮ್ಮ ತನುಮನ ಧನವೆಲ್ಲವೂ ಕನ್ನಡವೇ ಆಗಿದೆ. ಕನ್ನಡ ನಾಡಿನ ಸಾಂಸ್ಕೃತಿಕ ಪರಂಪರೆಯನ್ನು ವಿವರಿಸುತ್ತಾ ಇದನ್ನು ತಿಳಿಯದವನನ್ನು.

``ತನ್ನ ಮರೆಯ ಕಂಪನರಿಯದದನೆ ಹೊರಗೆ ಹುಡುಕುವ

ಮೃಗದ ಸೇಡು ನಮ್ಮ ಪಾಡು ಪರರ ನುಡಿಗೆ ಮಿಡುಕುವ''.[2]

ನಮ್ಮ ಮಾತೃ ಭಾಷೆಯಲ್ಲಿನ ಸಂಪತ್ತಿನ ಕಂಪನ್ನು ತಿಳಿಯದೆ ಹೊರಗೆ, ಹುಡುಕುವವರಾಗಿದ್ದೇವೆ. ಪರರ ಭಾಷೆಯಲ್ಲೇ ಜೀವಿಸಲು ಹಂಬಲಿಸುತ್ತೇವೆ. ನಮ್ಮ ಭಾಷೆಯೇ ಸಮೃದ್ಧವಾಗಿರುವಾಗ ಅದನ್ನು ಮರೆಯುವುದು ಅಮಾನವೀಯವೆಂಬುದನ್ನು ತೋರಿಸಿದ್ದಾರೆ.

``ನಮ್ಮೆದೆಯಂ ತಾಯೆ ಬಲಿಸು,

ಎಲ್ಲರ ಬಾಯಲ್ಲಿ ನೆಲಸು,

ನಮ್ಮ ಮನಮನೊಂದೆ ಕಲಸು,

ಇದನೊಂದನೆ ಕೋರುವೆ

ನಿನ್ನ ಮೂರ್ತಿ ಜಗತ್ಕೀರ್ತಿ ಎಂದಿಗೆಮಗೆ ತೋರುವೆ?''[3]

ನಮ್ಮೆದೆಯಲ್ಲಿ ಶಾಶ್ವತವಾಗಿ ನೆಲೆಸುವಂತೆ, ಕನ್ನಡಿಗರೆಲ್ಲರೂ ಕನ್ನಡವನ್ನೇ ಜಪಿಸುವಂತೆ ಮಾಡಲು ಕನ್ನಡ ಮಾತೆಯನ್ನು ಕವಿ ಕೋರುತ್ತಾರೆ.

ಮಾತೃಭಾಷೆಯಲ್ಲೇ ಉಸಿರಾಡುವುದರಿಂದ ಜಗತ್ಕೀರ್ತಿಯನ್ನು ಪಡೆಯಲು ಸಾಧ್ಯವೆಂದು ತೋರಿಸುತ್ತಾರೆ.

ತನ್ನ ಭಾಷೆಯಲ್ಲಿಯೇ ಅಲ್ಲದೆ ಬೇರೆ ಭಾಷೆಯಿಂದ ನಾವು ನಿಜವಾದ ತಿಳುವಳಿಕೆಯನ್ನು ಪಡೆಯುವುದು ಸಾಧ್ಯವಿಲ್ಲವೆನ್ನುವುದನ್ನು

``ತನ್ನ ತಾಯ್ನುಡಿಯಿಂದ ದುಡಿದ ಬಿಜ್ಜೆಯೆ ಬಿಜ್ಜೆ

ಹೆರರ ನಾಲಗೆಯುಂಜಲೆನ್ನುಗಂ ಸವಿಯೆ? ''[4]

ಎಂದು ಪ್ರಶ್ನಿಸುತ್ತಾರೆ. ಬ್ರಿಟಿಷರು ನಮ್ಮನ್ನಾಳಿ ಅವರ ಭಾಷೆಯನ್ನು ನಮಗೆ ಕಲಿಸಿ ಹೋಗಿದ್ದಾರೆ. ಆದರೆ ತಾಯ್ನುಡಿಯಿಂದ ಪಡೆಯಬಹುದಾದ ಅರಿವು ಬೇರೆಯವರ ನುಡಿಯಿಂದ ತಿಳಿಯಲಾಗದು. ಇತರ ಎಂಜಲು ಹೇಗೆ ಸವಿಯಲು ಸಲ್ಲದೋ ಹಾಗೆ, ತಾಯ್ನುಡಿಯಲ್ಲದೆ ಬೇರೆಯದನ್ನು ಸವಿಯಲು ಸಾಧ್ಯವಿಲ್ಲ ಎನ್ನುವುದನ್ನು ಮನವರಿಕೆ ಮಾಡಿಸುತ್ತಾರೆ.

ಈ ಮಣ್ಣಿನ ಗುಣದಲ್ಲಿಕನ್ನಡದ ಸ್ವಾಭಾವಿಕತೆಯನ್ನು ಕಾಣುವ ಬಿ.ಎಂ.ಶ್ರೀ ಯವರು

**``ಕನ್ನಡ ನುಡಿ, ನಮ್ಮ ಹೆಣ್ಣು**

**ನಮ್ಮ ತೋಟದಿನಿಯ ಹಣ್ಣು**

**ಬಳಿಕ, ಬೇರೆ ಬೆಳೆದ ಹೆಣ್ಣು**

**ಒಳಗೆ ಸುಳಿದಳು``.**[5]

ಕನ್ನಡ ನುಡಿಯನ್ನು ಹೆಣ್ಣಿಗೆ ಹೋಲಿಸಿದ್ದಾರೆ. ನಮ್ಮ ಮಾತೆ ಎಲ್ಲಿಂದಲೋ ಬಂದವಳಲ್ಲ. ನಮ್ಮಲ್ಲಿಯೇ ಹುಟ್ಟಿ ಬೆಳೆದು ಹದಗೊಂಡವಳು. ನಮ್ಮವಳ ಬಳಿಗೆ ಬೇರೆ ಹೆಣ್ಣೊಂದು ಬಂದು ಸುಳಿದಿದೆ. ಉದಾರವಾದಿಗಳಾದ ಕನ್ನಡಿಗರು ಪರರು ನಮ್ಮ ಮಾತೆಯನ್ನು ಆವರಿಸಿ ನಿಂತಿದ್ದರೂ ಸುಮ್ಮನೆ ಅದನ್ನೇ ಅನುಸರಿಸುತ್ತಿದ್ದೇವೆ. ಅದಕ್ಕಾಗಿ ಪರಭಾಷೆಯಿಂದ ನಮ್ಮ ಭಾಷೆಗೆ ಆಗುತ್ತಿರುವ ಕುತ್ತನ್ನು ತಿಳಿದು ಎಚ್ಚರಗೊಳ್ಳಲು ಕರೆ ನೀಡುತ್ತಾರೆ.

`ಗಡಿನಾಡ ಕಿಡಿ' ಎಂದು ಜನರಿಂದ ಕರೆಸಿಕೊಂಡಿರುವ ಕವಿ ಕಯ್ಯಾರ ಕಿಞ್ಞಣ್ಣರೈ ಅವರು ಸಂಸ್ಕೃತವನ್ನು ಆಳವಾಗಿ ಅಧ್ಯಯನ ಮಾಡಿದ ಪಂಡಿತರು. ಕನ್ನಡಕ್ಕೆ ಸಂಪೂರ್ಣವಾಗಿ ತಮ್ಮನ್ನು ತಾವೇ ಸಮರ್ಥಿಸಿಕೊಂಡವರು.

ಕ್ರಿ.ಶ.೧೯೫೫ರಲ್ಲೇ ಕರ್ನಾಟಕದ ಏಕೀಕರಣಕ್ಕೆ ತಮ್ಮ ತನುಮನ ಧನವನ್ನು ಸಂಪೂರ್ಣವಾಗಿ ಅರ್ಪಿಸಿಕೊಂಡು ಕಾಸರಗೋಡು ಕನ್ನಡ ನಾಡಿಗೇ ಸೇರಬೇಕೆಂದು ಗುಡುಗಿದರು. ಅದನ್ನು

**``ಬೆಂಕಿ ಬಿದ್ದಿದೆ ಮನೆಗೆ ಓ! ಬೇಗ ಬನ್ನಿ**

**ಎಲ್ಲರೂ ಎದ್ದೆದ್ದೂ ಓಡಿ ಬನ್ನಿ,**

**ಕನ್ನಡದ ಗಡಿಕಾಯ, ನುಡಿಕಾಯೆ**

**ಕಾಯಲಾರವೆ ಸಾಯೆ, ಓ! ಬೇಗ ಬನ್ನಿ**

**ಬೆಂಕಿ ಬಿದ್ದಿದೆ ಮನೆಗೆ ಓ! ಬೇಗಬನ್ನಿ**

**ಎಲ್ಲರೂ ಎದ್ದೆದ್ದು ಓಡಿ ಬನ್ನಿ.``**[6]

ಗಡಿನಾಡಿನ ಕನ್ನಡದ ಮನೆ ಕಾಸರಗೋಡಿಗೆ ಬೆಂಕಿ ಬಿದ್ದಿದೆ ಎಂದು ಕರೆಕೊಟ್ಟರು. ಕಾಸರಗೋಡು ಇವರನ್ನು ನಿರಂತರವಾಗಿ ಕಾಡಿದ ಸಮಸ್ಯೆಯಂತಿದೆ. ಅದು ಕರ್ನಾಟಕದಲ್ಲಿ ಸೇರುವವರೆಗೂ ಸಮಾಧಾನವಿಲ್ಲ. ಇದು ಕಾಸರಗೋಡಿಗೆ ಮಾತ್ರ ಸಂಬಂಧಿಸಿದ ಸಮಸ್ಯೆಯಲ್ಲ ಇಡೀ ಕನ್ನಡದ ನಾಡಿಗೂ ಸಂಬಂಧಿಸಿದ್ದು, ಈಗ ಕಾಸರಗೋಡಿರಬಹುದು, ಎಚ್ಚರಗೊಳ್ಳದಿದ್ದರೆ ಇನ್ನೆಷ್ಟು ಪ್ರದೇಶಗಳಿಗೆ ಈ ದುರ್ಗತಿ ಒದಗುವುದು, ಅದನ್ನು ತಡೆಯಿರಿ. ಅದಕ್ಕಾಗಿ ಕಾಸರಗೋಡನ್ನು ಬಿಡದೆ ಪಡೆಯಲು ಕರೆ ನೀಡುತ್ತಾರೆ.

ಕನ್ನಡದ ಗಡಿಯನ್ನು ಕನ್ನಡಿಗರು ಕಾಯಲೇ ಬೇಕಾದ ಪರಿಸ್ಥಿತಿಯನ್ನು

**``ಹಾರೆ ಗುದ್ದಲಿ ಕೊಡಲಿ ನೊಗ ನೇಗಿಲೆತ್ತುತಲಿ**

**ನೆಲದಿಂದ ಹೊಲದಿಂದ ಹೊರಟು ಬನ್ನಿ**

**ಕನ್ನಡ ನಾಡಿಂದ ಕಾಡಿಂದ**

**ಗೂಡಿಂದ ಕಡಲಿಂದ ಸಿಡಿಲಿಂದ**

**ಗುಡುಗಿ ಬನ್ನಿ...., ಬೆಂಕಿ ಬಿದ್ದಿದೆ ಮನೆಗೆ".**[7]

ಕಾಯಲೇ ಬೇಕಾದ ಸಂದಿಗ್ಧತೆಯನ್ನು ವ್ಯಕ್ತಪಡಿಸಿದ್ದಾರೆ. ಹೊಲ-ಗದ್ದೆಗಳ ಕೆಲಸದಲ್ಲಿ ನಿರತರಾದ ರೈತರು ಅಪಾಯ ಒದಗಿದಾಗ ಕೈಯಲ್ಲಿದ್ದ ಹಾರೆ, ಗುದ್ದಲಿ, ಕೊಡಲಿ, ನೊಗ ಮೊದಲಾದ ಆಯುಧಗಳನ್ನು ಎಸೆದು ರಕ್ಷಣೆಗಾಗಿ ಓಡುವ ದೃಶ್ಯವನ್ನು ಕಣ್ಣಿಗೆ ಕಟ್ಟುವಂತೆ ಮೂಡಿಸಿದ್ದಾರೆ. ಕನ್ನಡ ನಾಡಿನ ಗಡಿ ಕಾಯುವ ಕೆಲಸ ಯೋಧರಿಗೆ, ಸಾಹಿತಿಗಳಿಗೆ, ಕವಿಗಳಿಗೆ ಮಾತ್ರ ಸೀಮಿತವಲ್ಲ. ನಾಡಿನಲ್ಲಿ ಜನಿಸಿದ ಪ್ರತಿಯೊಬ್ಬರ ಜವಾಬ್ದಾರಿ ಎಂಬುದನ್ನು ಕವಿ ನೆನಪಿಸುತ್ತಾರೆ. ಈ ವಿಚಾರದಲ್ಲಿ ಯಾವುದೇ ಭಿನ್ನಾಭಿಪ್ರಾಯಗಳಿಗೆ ಅವಕಾಶ ಕೊಡದೆ ಎಲ್ಲರ ಹಿತದ ದೃಷ್ಟಿಯಿಂದ ಈ ಕೆಲಸಕ್ಕೆ ಎಲ್ಲರೂ ಬರುವಂತೆ ಕವಿ ಕರೆ ಕೊಡುತ್ತಾರೆ. ಇಡೀ ಕನ್ನಡ ನಾಡನ್ನೇ ಜಾಗೃತಿಯತ್ತ ಸನ್ನದ್ಧ ಮಾಡಿದ ಕವಿಯಾಗಿ ಕಂಡು ಬರುತ್ತಾರೆ.

ಸಂಸ್ಕೃತ ಭೂಯಿಷ್ಠ ಭಾಷೆಯನ್ನು ಬಳಸುವ ಕವಿ ಕನ್ನಡ ಸಂಸ್ಕೃತ ಬೆರೆತರೆ ಅದರ ರುಚಿ ವೃದ್ಧಿಸುತ್ತದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ.

ಅದನ್ನ -

**`` ಸಕ್ಕದದ ಸಕ್ಕರೆಗೆ ಕನ್ನಡದ ಕತ್ತುರಿಯು**

**ಸೇರಿದರೆ-ಸವಿಯದನು ಕೇಳಬೇಕೇ?**

**ವಾಲ್ಮೀಕಿ ಜೊತೆಯಲ್ಲಿ ಪಂಪನಂ ಕಲಿತಲ್ಲಿ**

**ಆಗುವವಿತಾನಂದ-ಹೇಳಬೇಕೇ ?''**[8]

ಒಳ್ಳೆಯದು ಉಳಿದು ಬಾಳಬೇಕು, ಕೆಟ್ಟದ್ದು ನಾಶವಾಗಬೇಕು ಎಂಬ ಸರಳವಾದ ಪೂರ್ವನಿರ್ಧಾರಿತ ಮೌಲ್ಯದಂತೆ ಸಂಸ್ಕೃತ ಕನ್ನಡ ಮಿಶ್ರಣವನ್ನು ಒಪ್ಪಿಕೊಳ್ಳುತ್ತಾರೆ. ಇವೆರಡರ ಸವಿಯನ್ನು ಬಲ್ಲವ ಈ ಕವಿ.

ಭಾರತ ಪರಕೀಯರ ದಾಸ್ಯದಲ್ಲಿದ್ದ ಸಂದರ್ಭದಲ್ಲಿ ಶಾಂತಕವಿ ಜನಿಸಿದಾಗ ಕನ್ನಡ ನಾಡಿನಲ್ಲಿ ಕನ್ನಡವು ತನ್ನ ಸ್ವಂತಿಕೆಯನ್ನು ಮೆರೆಯುವಂತಹ ಸ್ಥಿತಿಯಲ್ಲಿರಲಿಲ್ಲ. ಹಾಗಾಗಿ ಅವರಿಗೆ ಕನ್ನಡ ನಾಡನ್ನು ರಕ್ಷಿಸಬೇಕೆಂಬ ಬಯಕೆ ಉಂಟಾಗಿದೆ.

**``ರಕ್ಷಿಸು ಕರ್ನಾಟಕ ದೇವಿ ಸಂರಕ್ಷಿಸು ಕರ್ನಾಟಕ ದೇವಿ''**

ಕನ್ನಡದ ಸ್ವಾಭಿಮಾನಕ್ಕೆ ಕನ್ನಡ ಪ್ರಜ್ಞೆ ಜಾಗೃತಗೊಳ್ಳಲು ಶ್ರಮಿಸಿದ ಕವಿ ಇವರು.

ಶ್ರೀನಿವಾಸ ಕಾವ್ಯನಾಮದ ಮಾಸ್ತಿಯವರು ಇಂಗ್ಲಿಷ್ ಭಾಷೆಯನ್ನು ಬಲ್ಲವರಾಗಿದ್ದರೂ ಕನ್ನಡದಲ್ಲೇ ತನ್ನ

ಮನದ ಭಾವನೆಯನ್ನು ಬರಹಕ್ಕಿಳಿಸುವುದನ್ನು ಕುರಿತಂತೆ ಒಂದೆಡೆ ಹೀಗೆ ನುಡಿಯುತ್ತಾರೆ-

**``ಪರಭಾಷೆಯುಂ ಕಲಿತಿವಂ**

**ವಿರಚಿಸೆ ತೊಡಗಿಹೆನು ಕನ್ನಡದಿ ಕವಿತೆಯುನೆಂ**

**ದೊರೆಯುವರೆ ಪ್ರಾಜ್ಞರ್ ಸಂ**

**ಚರಿಸುವುದಲೆ ಕಾವ್ಯ ಶಕ್ತಿಯೆಲ್ಲ ನುಡಿಯೊಳಂ''**

ಮಾಸ್ತಿಯವರು ಇಂಗ್ಲಿಷ್ ಭಾಷೆಯುನ್ನು ಕಲಿತರೂ, ಕನ್ನಡವು ಶ್ರೇಷ್ಠ ಭಾಷೆ, ಮಾತೃ ಭಾಷೆಯಾದುದರಿಂದಲೂ, ಚಿಕ್ಕಂದಿನಲ್ಲಿ ಕಲಿತ ಭಾಷೆಯಾದುದ್ದರಿಂದಲೂ ಕನ್ನಡದಲ್ಲೇ ಕವಿತೆಯನ್ನು ರಚಿಸುವುದಾಗಿ ಹೇಳಿಕೊಂಡಿದ್ದಾರೆ.

ರಾಷ್ಟ್ರೀಯ ಪ್ರಜ್ಞೆಯನ್ನು ಜನರಲ್ಲಿ ಜಾಗೃತಗೊಳಿಸಿದಂತೆ, ತಾಯಿ ಭುವನೇಶ್ವರಿಯ ಹೆಮ್ಮೆಯ ಪುತ್ರ ಎಂಬುದನ್ನು ರಾಷ್ಟ್ರಕವಿ ಕುವೆಂಪು ಅವರು ಸಾಬೀತು ಪಡಿಸಿದ್ದಾರೆ. ಕರ್ನಾಟಕ ಮಾತೆಯನ್ನು ಭಾರತ ಜನನಿಯ ತನುಜಾತೆ ಎಂದು ಕರೆಯುವುದರ ಮೂಲಕ ಕರ್ನಾಟಕದ ಗತವೈಭವವನ್ನು ಸಾರಿದ್ದಾರೆ.

**``ಜೈ! ಭಾರತ ಜನನಿಯ ತನುಜಾತೆ**

**ಜಯ ಹೇ ಕರ್ನಾಟಕ ಮಾತೆ!**

**ಜೈ! ಸುಂದರ ನದಿವನಗಳ ನಾಡೆ**

**ಜಯ ಹೇ ರಸ ಋಷಿಗಳ ಬೀಡೆ!''** [9]

ಕರ್ನಾಟಕ ಎಂತಹ ಘನತೆವೆತ್ತ ನಾಡು, ಈ ನಾಡಿನಲ್ಲಿ ವನಸಂಪತ್ತು ಕವಿಮನಸ್ಸು, ಧರ್ಮ ಸುಧಾರಕರು ಜನ್ಮ ಪಡೆದ ನಾಡಿನ ಮಹಿಮೆಯನ್ನು ಕೊಂಡಾಡಿದ್ದಾರೆ. ಜೊತೆಗೆ `ಅಖಂಡ ಕರ್ನಾಟಕ!' ಕಲ್ಪನೆಯನ್ನು ಮೂಡಿಸಿದ್ದಾರೆ.

**``ಕರ್ನಾಟಕ ಎಂಬುದೇನು**

**ಹೆಸರೆ ಬರಿಯ ಮಣ್ಣಿಗೆ?**

**ಮಂತ್ರ ಕಣಾ! ಶಕ್ತಿಕಣಾ!**

**ತಾಯಿ ಕಣಾ! ದೇವಿ ಕಣಾ!**

**ಕಾವ ಕೊಲುವ ಒಲವ ಬಲವ**

**ಪಡೆದ ಚಲದ ಚಂಡಿ ಕಣಾ! ''** [10]

ಕರ್ನಾಟಕ ಎಂಬ ಹೆಸರಿನ ಜೀವ ಚೈತನ್ಯವನ್ನು ಹೇಳುತ್ತಾ ಅದು ಈ ನಾಡಿನ ಮಣ್ಣಿಗಿಟ್ಟ ಹೆಸರಾಗಿ ಉಳಿದಿಲ್ಲ. ಕರ್ನಾಟಕ ಎಂಬುದು ಮಂತ್ರ, ಶಕ್ತಿ, ದೇವಿ, ತಾಯಿ, ಬೆಂಕಿ, ಸಿಡಿಲಂತೆ ಕಾಯುವವರನ್ನು ಕಾಪಾಡುವ, ತೊಂದರೆ ಕೊಟ್ಟರೆ ಬೆಂಕಿಯಂತೆ, ಸಿಡಿಲಿನಂತೆ ಚಂಡಿಯ ರೂಪತಾಳುವ ಶಕ್ತಿಯಿರುವವಳು. ಅವಳ ಪೂಜಿಸಿದರೆ ನಿನ್ನ

ಒಲವಿನ ಬಲವು ಹೆಚ್ಚಾಗುತ್ತದೆ. ಇಂತಹ ಶಕ್ತಿಯು ಮಾತೃಭಾಷೆಯ ಮೇಲೆ ಪ್ರತಿಯೊಬ್ಬರಿಗೂ ಹೊಮ್ಮಬೇಕಾದ ಭಾವ. ಇದನ್ನು ಕಡೆಗಣಿಸಿ ಭಾರತದ ಕೆಲವು ರಾಜ್ಯಗಳಲ್ಲಿ ಮೂರನೆಯ ತರಗತಿಯಿಂದಲೂ ಇಂಗ್ಲಿಷ್‌ನ್ನು ಹೇಳಿಕೊಡಲು ಪ್ರಾರಂಭಿಸಲು ನಿರ್ಧರಿಸಿದ್ದರೆಂಬ ದೇಶ ವಿನಾಶಕವಾದ ಅಮಂಗಳ ವಿಷಯ ತಿಳಿದು ಕವಿಯ ಮನವು `ಪ್ರಾರ್ಥಿಸಿ, ಓ ಮಕ್ಕಳಿರಾ!' ಎಂಬ ಕವಿತೆಯಲ್ಲಿ -

**`` ಪಾರು ಮಾಡೆಮ್ಮನೀ ಇಂಗ್ಲಿಷಿನಿಂದ,**

**ಪೂತನಿಯ ಅಸುವೀಂಟಿಕೊಂದ ಗೋವಿಂದ!''[11]**

ಎಳೆಯ ಮುಗ್ಧ ಮನಸ್ಸಿನ ಮಕ್ಕಳಿಗೆ ಈ ಭಾರವನ್ನೇರಿಸಬೇಡಿ, ಹಾಲುಣ್ಣುವ ಬಾಯಿಗೆ ವಿಷವನ್ನುಣ್ಣಿಸುವ ಕಾಯಕ ಬಿಟ್ಟು, ಕಂದಮ್ಮಗಳು ಅದನ್ನು ಓಲ್ಲೆನೆನ್ನುವಂತೆ ಬೇಡುತ್ತಾರೆ. ಇಂಗ್ಲಿಷಿನ ವ್ಯಾಮೋಹದಿಂದ ಕನ್ನಡ ನುಡಿ ಸಾಯುತ್ತಿರುವುದನ್ನು ಕುರಿತು-

``ಸಾಯುತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ!" ಎಂದು ಎಚ್ಚರಿಸಿದ್ದಾರೆ.

**``ಸಾಯುತ್ತಿದೆ ನಿಮ್ಮ ನುಡಿ, ಓ ಕನ್ನಡದ ಕಂದರಿರ,**

**ಹೊರನುಡಿಯ ಹೊರೆಯಿಂದ ಕುಸಿದು ಕುಗ್ಗಿ !**

**ರಾಜನುಡಿಯೆಂದೊಂದು, ರಾಷ್ಟ್ರ ನುಡಿಯೆಂದೊಂದು,**

**ದೇವನುಡಿಯೆಂದೊಂದು ಹತ್ತಿ ಜಗ್ಗಿ !''[12]**

ರಾಜ್ಯ ಭಾಷೆ, ರಾಷ್ಟ್ರ ಭಾಷೆಗಳ ನಡುವೆ ನಮ್ಮ ಮಾತೃಭಾಷೆಯನ್ನು ಉಳಿಸಿ, ಬೆಳೆಸಲು ಮುಂದಾಗಿ, ಇಲ್ಲದಿದ್ದರೆ ಕನ್ನಡ ತನ್ನ ಅಸ್ತಿತ್ವವನ್ನು ಉಳಿಸಿಕೊಳ್ಳಲು ಸಾಧ್ಯವಾಗದೇ ಹೋಗುತ್ತದೆ.

ಇಂದಿನ ಜನರಲ್ಲಿ ಪರಭಾಷಾ ವ್ಯಾಮೋಹ ಅತಿಯಾಗಿ ಮಾತೃಭಾಷೆಯನ್ನೇ ಮರೆಯುವ ಹಂತಕ್ಕೆ ತಲುಪಿರುವುದನ್ನು ಕಂಡು ಕವಿ ಮನಸ್ಸಿಗೆ ಕನ್ನಡ ಸಾಯುತ್ತಿದೆ ಎನಿಸಿರುವುದರಲ್ಲಿ ತಪ್ಪಿಲ್ಲ.

ನಮ್ಮನ್ನು ಗುಲಾಮರಾಗಿ ಮಾಡಿಕೊಂಡಿದ್ದ ಇಂಗ್ಲಿಷರ ದಾಸ್ಯದಿಂದ ಮುಕ್ತಿಗೊಂಡರೂ, ಅವರ ಭಾಷೆ ನಮ್ಮನ್ನು ಸವಾರಿ ಮಾಡುತ್ತಿರುವುದು ವಿಪರ್ಯಾಸದ ಸಂಗತಿಯಾಗಿದೆ.

**`` ಗಾಂಧಿಯಿಂದಿಂಗ್ಲಿಷರ ದಾಸ್ಯಂ ಪಾರಾದೆ;**

**ಅವನ ಕೊಂದಿಂಗ್ಲಿಷಿಗೆ ದಾಸಿಯಾದೆ.**

**ಓ ತಾಯಿ ಭಾರತಿಯೆ ಚೀಣೀಯರನೆ ಮಾರಿ**

**ಹಿಂಡುತಿದೆ ಕಂದರನು ಇಂಗ್ಲಿಷಿನ ಮಾರಿ''.[13]**

ನಮ್ಮನ್ನು ದಾಸ್ಯದಿಂದ ಪಾರು ಮಾಡಲು ಗಾಂಧಿ ಅವತರಿಸಬೇಕಾಯಿತು. ಅಂತಹ ಗಾಂಧಿಯನ್ನು ಕೊಂದ ಇಂಗ್ಲಿಷಿಗೆ ನಾವು ದಾಸರಾಗಿದ್ದೇವೆ. ಕನ್ನಡದ ಕಂದರಿಗೆ ಇಂಗ್ಲಿಷಿನ ಮಾರಿ ಹೊಕ್ಕು ಅದು ಸರ್ವವ್ಯಾಪಿಯಾಗುತ್ತಿದೆ.

ಜ್ಞಾನಕ್ಕಾಗಿ ಹಲವಾರು ಭಾಷೆಗಳನ್ನು ಕಲಿಯುವುದರಿಂದ ತಪ್ಪೇನಿಲ್ಲ ಎಂಬುದನ್ನು

``ಬಲತ್ಕಾರವಾಗಿ ಮಾತ್ರವೆ ಹೊರತು ಈ ರೋಷ

ಭಾಷೆಯಾಗಿಯೆ ನಮ್ಮ ದ್ವೇಷವೇನಿಲ್ಲ''.[14]

ಎನ್ನುತ್ತಾರೆ. ಅದನ್ನು ಸಾಕಾರಗೊಳಿಸಲು ಕುವೆಂಪು ಮೈಸೂರು ವಿಶ್ವ ವಿದ್ಯಾಲಯದಲ್ಲಿ ಉಪ ಕುಲಪತಿಗಳಾಗಿದ್ದಾಗ ಎಲ್ಲ ಭಾಷೆಗಳನ್ನು ಕಲಿಯಲು ಅನುವು ಮಾಡಿದ್ದರು.

ಸಮಕಾಲೀನ ಸಮಾಜದಲ್ಲಿ ಕನ್ನಡದ ಭಾಷೆಯ ಸ್ಥಿತಿಗತಿಗಳ ಚಿತ್ರಣವನ್ನು ಸಮರ್ಥವಾಗಿ ಚಿತ್ರಿಸಿದ್ದಾರೆ.

``ಬಾರಿಸು ಕನ್ನಡ ಡಿಂಡಿಮವ,

ಓ ಕರ್ನಾಟಕ ಹೃದಯ ಶಿವ!

ಸತ್ತಂತಿಹರನು ಬಡಿದೆಚ್ಚರಿಸು;

ಕಚ್ಚಾಡುವರನು ಕೂಡಿಸಿ ಒಲಿಸು

ಹೊಟ್ಟೆಯ ಕಿಚ್ಚಿಗೆ ಕಣ್ಣೀರ್ ಸುರಿಸು;

ಒಟ್ಟಿಗೆ ಬಾಳುವ ತೆರದಲಿ ಹರಸು! ''[15]

ತಾಯ್ನುಡಿಯನ್ನು ಮರೆತವನ ಹೃದಯದಲ್ಲಿ ತನ್ನ ಮಾತೃಭಾಷೆಯ ಬಗ್ಗೆ ಉತ್ಕರ್ಷೆ ಮೂಡಿಸುವಂತಹ ಆಕ್ರೋಶದ ಧ್ವನಿಯನ್ನು ಕುವೆಂಪು ವ್ಯಕ್ತಪಡಿಸುತ್ತಾರೆ. ಇಷ್ಟೆಲ್ಲಾ ಕನ್ನಡ ಭಾಷೆಯ ಅಳಿವಿನ ಉಳಿವಿಗಾಗಿ ದುಡಿದ ಕವಿ -

``ಎಲ್ಲಾದರೂ ಇರು, ಎಂತಾದರೂ ಇರು;

ಎಂದೆಂದಿಗೂ ನೀ ಕನ್ನಡವಾಗಿರು

ಕನ್ನಡ ಗೋವಿನ ಓ ಮುದ್ದಿನ ಕರು,

ಕನ್ನಡತನವೊಂದಿದ್ದರೆ ನೀ ನಮ್ಮಗೆ ಕಲ್ಪತರು !''[16]

ಕವಿ ಕೊನೆಗೆ ಭಾಷೆಯ ಬಗೆಗೆ ಒಂದು ಸ್ಪಷ್ಟ ನಿಲುವನ್ನು ತಾಳಿರುವುದನ್ನು ಕಾಣಬಹುದು.

ಕನ್ನಡದ ಕಂದವ್ವನಿಗೆ ಲಾಲಿ ಪದ ಹಾಡಿದ ಮಾತೃ ಹೃದಯವುಳ್ಳ ಕವಿ `ಬೇಂದ್ರೆ' ಕರ್ನಾಟಕದ ಏಕೀಕರಣ ಚಿಂತನೆಯನ್ನು ಕುರಿತು ಅಂತರಂಗದ ಮಾತುಗಳನ್ನು ಈ ರೀತಿ ಹೇಳುತ್ತಾರೆ.

``ದುಃಸಾಧ್ಯ ಸಂಭಾವ್ಯವೆಂಬ ಸೊಲ್ಲಿನ ಗುಲ್ಲು

ಗುಡುಗಾಡುತ್ತಿದೆ ಕನ್ನಡದಿ ಕನ್ನಡಿಯು ಒಡೆದು

ಬೆಸೆಯ ಬರದಂತೆ ದೆಸೆಯುದೆಸೆಗೆ ಬಿದ್ದಿದೆ. ಹಿಡಿದು

ಕಟ್ಟಬಲ್ಲಾ ಕೈಯೆ ಕಾಣದಿದೆ''.[17]

ಕನ್ನಡದ ನಾಡು ಹರಿದು ಹಂಚಿ ಹೋಗಿರುವುದನ್ನು, ಅದನ್ನೆಲ್ಲಾ ಒಗ್ಗೂಡಿಸುವ ಕೈಗಳು ಕಾಣುತ್ತಿಲ್ಲ. ಕನ್ನಡ ಮಾತನಾಡುವ ಪ್ರದೇಶಗಳೆಲ್ಲ ಒಂದೇ ಆಡಳಿತ ವ್ಯಾಪ್ತಿಗೆ ಬರುತ್ತದೆಂಬುದು ದುಃಸಾಧ್ಯವಾದರೂ ಸಂಭಾವ್ಯವಾದುದು ಎಂದು ನುಡಿಯುತ್ತಾರೆ.

ಕನ್ನಡದ ಅಭಿಮಾನ ಇಲ್ಲದವರನ್ನು ಕಂಡು ಕವಿಗೆ ಆತಂಕ ಉಂಟಾಗುತ್ತದೆ. ಅದನ್ನು -

**`` ಒಂದೇ ಒಂದೇ ಒಂದೇ ಕರ್ನಾಟಕ ಒಂದೇ !**

**ಇಂದೇ ಮುಂದೆ ಎಂದೇ ಕರ್ನಾಟಕ ಒಂದೇ**

**ಜಗದೇಳಿಗೆಯಾಗುವದಿದೆ ಕರ್ನಾಟಕದಿಂದ**

**ಇಲ್ಲಿಯ ಜನ-ಮನ-ಭಾಷೆಯು ಕನ್ನಡವದು ಒಂದೇ**

**ಕುಲವೊಂದೇ ಸ್ಥಲವೊಂದೇ ನೀತಿಯು ನೆಲೆಯೊಂದೇ**

**ಹೀಗೆನ್ನದ ಹೆರವರು ಅವರಿದ್ದರು ಒಂದೇ**

**ಇರದಿದ್ದರೂ ಒಂದೇ !''**[18]

ಇಂದು, ಮುಂದೆ, ಎಂದೆಂದಿಗೂ ಒಂದೇ ಕರ್ನಾಟಕ. ಇಲ್ಲಿನ ಜನ, ಮನ, ಭಾಷೆ, ಕುಲ, ಸ್ಥಲ, ನೀತಿ, ನೆಲೆ ಎಲ್ಲವೂ ಒಂದೇ. ಅದೇ ಕರ್ನಾಟಕ. ಈ ಕರ್ನಾಟಕದಿಂದಲೇ ಜಗದೇಳಿಗೆಯಾಗುತ್ತದೆ. ಇದನ್ನು ಅರಿಯದ ನಿರಭಿಮಾನದ ಕನ್ನಡಿಗನು ಇದ್ದರೂ ಒಂದೇ, ಅವರು ಇಲ್ಲದಂತೆಯೇ ಸರಿ. ಅದಕ್ಕೆ ಕವಿ ಜೈಕಾರ ಹಾಕುತ್ತಾರೆ. ಕನ್ನಡದ ಬಗ್ಗೆ ಅಭಿಮಾನ ಸತ್ತವರ ಮನದಲ್ಲಿ ಕನ್ನಡದ ಕಹಳೆಯನ್ನು ಊದಿ ಎಚ್ಚರಿಸುವ ಪ್ರಯತ್ನವನ್ನು ಮಾಡಿದ್ದಾರೆ. ಆಗ,

**``ಕರ್ನಾಟಕವನು ಕಡೆದರು ಹೊರಟಿತು**

**ಕನ್ನಡವೆನ್ನುವ ನವನೀತ''.**[19]

ಕನ್ನಡಿಗರ ಅಭಿಮಾನದ ಎದೆಯಲ್ಲಿ ಕನ್ನಡತನದ ಬುಗ್ಗೆ ಚಿಮ್ಮಿದಾಗ ಕನ್ನಡವೆನ್ನುವ ನವನೀತ ಉದಯಿಸುತ್ತದೆ ಎನ್ನುತ್ತಾ -

**`` ನನ್ನದು ಈ ಕನ್ನಡ ನಾಡು ನನ್ನದೋ !**

**ಅವರಿವರದೆಂದು ಎಂದೂ ಎನ್ನದೋ !**

**ಅದುನನ್ನದೆಂತು ಹಾಗೇs ನಿನ್ನದೋ!**

**ನನ್ನದು ಈ ಕನ್ನಡ ನಾsಡು**

**ಈ ಕನ್ನಡ ನಾಡು ನನ್ನದು ''**[20]

ಇದು ಅವರೊಬ್ಬರ ಮನದ ಮೆಚ್ಚಿಗೆಯ ಮಾತಲ್ಲ. ಅದು ಎಲ್ಲಾ ಕನ್ನಡಿಗರ ಎದೆಯಲ್ಲೂ ಹೊಮ್ಮಬೇಕಾದ ಭಾವ.

ನಾಡು ನುಡಿಯ ಅಕ್ಕರೆ, ಪ್ರೀತಿಯೆ ಕವಿಯ ಹೃದಯಾಂತರಾಳದಿಂದ ಅನನ್ಯ ಧ್ವನಿಯಾಗಿ ಹೊರಡುವುದನ್ನು ಡಿ.ಎಸ್.ಕರ್ಕಿಯವರು ಈ ರೀತಿ ನುಡಿಕೊಡುತ್ತಾರೆ.

**``ಹಚ್ಚೇವು ಕನ್ನಡದ ದೀಪ**

**ಕರುನಾಡ ದೀಪ**

**ಸಿರಿನುಡಿಯ ದೀಪ**

**ಒಲವೆತ್ತಿ ತೋರುವಾ ದೀಪ''**

ನವೋದಯ ಕಾವ್ಯ ಜಗತ್ತಿನಲ್ಲಿ ನಾಡುನುಡಿಯ ಅಭಿಮಾನವನ್ನು ಚಿಮ್ಮಿಸುವ ಈ ಕವಿತೆ ಅಂಧಕಾರದಲ್ಲಿ ಮುಳುಗಿದ್ದವರಿಗೆ ಬೆಳಕು ನೀಡಲು ಹೊತ್ತಿಸಿಟ್ಟ ದೀಪವಾಗಿದೆ.

ಕಾವ್ಯಾನಂದರವರು ಉಜ್ವಲ ನಾಡುನುಡಿಯ ತೀವ್ರಾಭಿಮಾನವನ್ನು ಅವರು-

**``ಹೊತ್ತಿತೋ ಹೊತ್ತಿತು ಕನ್ನಡದ ದೀಪ**

**ಮುಗಿಯಿತೋ ಮುಗಿಯಿತೋ ಶತಮಾನಗಳ ಶಾಪ!**

**ಕಣ್ಣು ಕುಕ್ಕಿಸುವಂತೆ ದೇದಿಪ್ಯಮಾನ ಹರ್ಷವುಕ್ಕಿಸುವಂತೆ ಶೋಭಾಯಾಮಾನ''**

ಹೊತ್ತಿತೋ ಹೊತ್ತಿತು ಕನ್ನಡದ ದೀಪ ಎಂಬ ನಾಡುನುಡಿಯ ಕಳಕಳಿಯಲ್ಲಿ ಕವಿಯ ಅಕ್ಕರೆಯನ್ನು ಕಾಣಬಹುದು. ಕನ್ನಡದ ದೀಪ ಹತ್ತಿ ಶತಮಾನಗಳಿಂದ ಅಂಟಿದ್ದ ಶಾಪವನ್ನು ಇಲ್ಲವಾಗಿಸಿದೆ. ಆ ದೀಪದ ಬೆಳಕಿನಲ್ಲಿ ಕಣ್ಣುಕುಕ್ಕುವಂತೆ ದೇದೀಪ್ಯಮಾನವಾಗಿ ಈನಾಡು ಕಂಡಿದೆ. ಅದನ್ನು ಕಂಡು ಹರ್ಷವುಕ್ಕುತ್ತದೆ ಎಂಬುದನ್ನು ಸೂಚಿಸಿದ್ದಾರೆ.

ಹೀಗೆ ಕನ್ನಡ ನವೋದಯ ಕವಿಗಳಿಗೆ ಕನ್ನಡ ಭಾಷಾ ಚಳವಳಿ ಕಾವ್ಯ ವಸ್ತುವಾಗಿ ಒದಗಿ ಬಂದು ಏಕೀಕರಣಕ್ಕಾಗಿ ಶ್ರಮಿಸಿದೆ. ಕನ್ನಡವೇ ಕರ್ನಾಟಕದ ಆಡಳಿತ ಭಾಷೆಯಾಗಬೇಕು. ಶಿಕ್ಷಣ ಮಾಧ್ಯಮದ ಭಾಷೆಯಾಗಬೇಕೆಂದು ಕೂಗಿದ ನವೋದಯ ಕವಿಗಳ ಅಭಿಮಾನ, ಹಾರೈಕೆಯ ಫಲವಾಗಿ ಕರ್ನಾಟಕ ಏಕೀಕರಣವಾಗಿ ಮಾತೃಭಾಷೆ ಕನ್ನಡವು ರಾಜ್ಯ ಭಾಷೆಯಾಯಿತು. ಇಂತಹ ಕನ್ನಡ ನಾಡಿನಲ್ಲಿ ಭಾಷಾ ಸಮಸ್ಯೆಯೆಂಬದು ಇನ್ನೂ ಸಂಪೂರ್ಣವಾಗಿ ನಾಶವಾಗದಿರುವುದು ವಿಪರ್ಯಾಸವೇ ಸರಿ. ಕನ್ನಡ ಮಾತನಾಡುವ ಜನರಿರುವ ಪ್ರದೇಶಗಳನ್ನು ಒಗ್ಗೂಡಿಸಿ ಅಖಂಡ ಕರ್ನಾಟಕವನ್ನು ನಿರ್ಮಾಣ ಮಾಡಿಕೊಂಡು, ರಾಜ್ಯ ಭಾಷೆಯಾಗಿ ಸ್ವೀಕರಿಸಿದರೂ ಪರಭಾಷಾ ವ್ಯಾಮೋಹದಿಂದ ಕನ್ನಡ ಕಣ್ಮರೆಯಾಗುತ್ತಿರುವುದನ್ನು ಕಾಣಬಹುದು. ಇಂಗ್ಲೀಷನ್ನು ನಮ್ಮ ವ್ಯವಹಾರ ಹಾಗೂ ಶಿಕ್ಷಣ ಮಾಧ್ಯಮದಲ್ಲಿ ಹೆಚ್ಚಾಗಿ ಬಳಸುವುದು ಅಪಾಯಕಾರಿಯಾದುದು. ಹೀಗೆ ಹೆಚ್ಚಿನ ಪ್ರಮಾಣದಲ್ಲಿ ಬಳಸುತ್ತಾ ಹೋದರೆ ನಮ್ಮ ನಾಡು-ನುಡಿ ನಾಶವಾಗುವುದರಲ್ಲಿ ಸಂದೇಹವಿಲ್ಲ. ಅದಕ್ಕಾಗಿ ಕನ್ನಡಿಗರು ಪರಭಾಷಾ ವ್ಯಾಮೋಹವನ್ನು ತೊರೆದು ಕನ್ನಡದಲ್ಲೇ ವ್ಯವಹರಿಸಲು ಮುಂದಾಗಬೇಕು. ನಮ್ಮ ಈ ತರಹದ ನಿರಾಸಕ್ತಿಯಿಂದ

ಹಾಗೂ ತಮಿಳಭಾಷಿಕರ ಒಳ ಸಂಚಿನಿಂದಾಗಿಯೇ ಕನ್ನಡ ಭಾಷೆಯು ಶಾಸ್ತ್ರೀಯ ಸ್ಥಾನಮಾನವನ್ನು ಪಡೆಯಲು ಇನ್ನೂ ಸಾಧ್ಯವಾಗದಿರುವುದು. ಶಾಸ್ತ್ರೀಯ ಸ್ಥಾನಮಾನವನ್ನು ದೊರಕಿಸಿಕೊಳ್ಳಲು ಶ್ರಮಿಸುತ್ತಿರುವವರಿಗೆ ಕನ್ನಡಿಗರು ಬೆಂಬಲಿಗರಾಗಿ ನಿಂತು ಹೋರಾಡಿ ಕನ್ನಡ ಭಾಷೆಗೆ ಶಾಸ್ತ್ರೀಯ ಸ್ಥಾನಮಾನ ಪಡೆಯುವತ್ತ ಸಾಗಲು ಎಲ್ಲರೂ ಮನಸ್ಸು ಮಾಡುತ್ತಾರೆಂದು ಆಶಿಸೋಣ.

## ಅಡಿ ಟಿಪ್ಪಣಿಗಳು

1. ಗೋವಿಂದ ಪೈ;ಗಿಳಿವಿಂಡು; ಪುಟ-82

2. ಅದೇ.

3. ಅದೇ.. ಪುಟ-83

4. ಅದೇ.. ಪುಟ-37

5.ಬಿ.ಎಂ.ಶ್ರೀ;ಇಂಗ್ಲಿಷ್ ಗೀತಗಳು; ಪುಟ-01

6. ಕಯ್ಯಾರ ಕಿಞ್ಞಣ್ಣರೈ;ಬೆಂಕಿ ಬಿದ್ದಿದೆ ಮನೆಗೆ ಕವಿತೆ

7. ಅದೇ.

8.ಕಯ್ಯಾರ ಕಿಞ್ಞಣ್ಣರೈ;ಶತಮಾನದ ಗಾನ, ಪುಟ-134

9.ಕುವೆಂಪು ಸಮಗ್ರ ಕಾವ್ಯ, ಸಂಪುಟ -1; ಪುಟ-106

10.ಕುವೆಂಪು ಸಮಗ್ರಕಾವ್ಯ, ಸಂಪುಟ-2; ಪುಟ-124

11.ಅದೇ. ಪುಟ-429

12.ಕುವೆಂಪು ಸಮಗ್ರ ಕಾವ್ಯ, ಸಂಪುಟ-1; ಪುಟ-385

13 ಅದೇ. ಸಂಪುಟ-2; ಪುಟ-439

14. ಅದೇ. ಪುಟ-440

15. ಅದೇ.ಪುಟ -417

16. ಅದೇ. ಸಂಪುಟ-1; ಪುಟ-357

17. ವಾಮನ ಬೇಂದ್ರೆ; ಅಂಬಿಕಾತನಯ ದತ್ತ ಸಮಗ್ರ ಕಾವ್ಯ;ಸಂಪುಟ -2 ಪುಟ-395

18.ಅದೇ. ಪುಟ-413

19.ಅದೇ. ಪುಟ-403

20. ಅದೇ. ಪುಟ-415

# ಅಧ್ಯಾಯ :೬

# ಉಪಸಂಹಾರ

ಭಾರತದಲ್ಲಿನ ಸಂಪತ್ತು, ಸಮೃದ್ಧಿಯನ್ನು ಕಂಡ ಪಾಶ್ಚಿಮಾತ್ಯರು, ನಮ್ಮ ದೇಶದೊಡನೆ ವ್ಯಾಪಾರ ಸಂಬಂಧವನ್ನಿಟ್ಟುಕೊಂಡು ಪರಸ್ಪರ ನಿಕಟವರ್ತಿ ರಾಷ್ಟ್ರಗಳಾದವು. ಅಂತೆಯೇ ಬ್ರಿಟಿಷರೂ ಭಾರತಕ್ಕೆ ಪ್ರವೇಶಿಸಿದ್ದು ವ್ಯಾಪಾರದ ಉದ್ದೇಶವೇ ಆದರೂ, ಇಲ್ಲಿನ ರಾಜಕೀಯ ಅನೈಕ್ಯತೆಯು ವಾತಾವರಣವನ್ನು ಕಂಡು, ಅದನ್ನು ಸದುಪಯೋಗಪಡಿಸಿಕೊಂಡರು. ವಸಾಹತುಶಾಹಿ ನೆಲೆಗಳಾಗಿ ಪರಿವರ್ತಿಸಿಕೊಂಡರು. ಇದರಿಂದ ಭಾರತದ ಆಡಳಿತವೆಲ್ಲ ಬ್ರಿಟಿಷರ ಹಿಡಿತದಲ್ಲಿದ್ದು, ಬಿಡುಗಡೆಯನ್ನು ಪಡೆಯಲು ಹೋರಾಟವನ್ನೇ ಮಾಡಬೇಕಾಯಿತು. ಮಹಾತ್ಮ ಗಾಂಧಿಯವರ ಮುಂದಾಳತ್ವದಲ್ಲಿ ಈ ನಾಡಿನ ಪ್ರಜ್ಞಾವಂತ ಜನರೆಲ್ಲ ಪರಕೀಯ ಪ್ರಭುತ್ವದ ವಿರುದ್ಧ ಹೋರಾಡಿದುದು ಇಂದು ನಮಗೆ ನೆನಪಾಗಿ ಉಳಿದಿದೆ. ಈ ಹೋರಾಟದ ಕಾಲದಲ್ಲಿ ಜನತೆಯನ್ನು ಪ್ರೇರೇಪಿಸಿದ ಕವಿಗಳು ಹಾಗೂ ಹೋರಾಟದಿಂದ ಸ್ಫೂರ್ತಿಗೊಂಡ ಕಾವ್ಯವು ಗಣನೀಯವಾದುದು.

ಯಾವುದೇ ಸಾಹಿತ್ಯವು ಸಾಮಾಜಿಕ ಸ್ಥಿತಿಗತಿಗಳಿಗನುಗುಣವಾಗಿ, ಆ ಕಾಲದ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಡುತ್ತದೆ. ೧೯ ನೆಯ ಶತಮಾನದ ಕೊನೆಯಲ್ಲಿ ಹೊಸಗನ್ನಡ ಸಾಹಿತ್ಯದ ಉದಯವಾಯಿತು. ಹೊಸಗನ್ನಡ ಸಾಹಿತ್ಯದ ಸಂದರ್ಭದಲ್ಲಿ ಸಾಹಿತ್ಯವು ನವೋದಯ, ಪ್ರಗತಿಶೀಲ, ನವ್ಯ, ದಲಿತ-ಬಂಡಾಯ ಎಂಬ ಹಂತಗಳಲ್ಲಿ ಬೆಳೆಯಿತು. ಕಾವ್ಯದಲ್ಲಾಗುವ ಈ ಬದಲಾವಣೆಯ ಹಂತಗಳು ಕಾಲಮಾನದಲ್ಲಿನ ಕವಿಯ ಮನೋಧರ್ಮದಿಂದ ಉಂಟಾಗುವಂತಹದ್ದು. ಹಾಗಾಗಿ, ಅಂದಂದಿನ ಜನ ಸಮುದಾಯದಲ್ಲಿನ ಆಚಾರ, ವಿಚಾರ, ನಂಬಿಕೆ, ರೀತಿನೀತಿ, ಸ್ವಾತಂತ್ರ್ಯ, ಪ್ರಜಾಪ್ರಭುತ್ವ ಮತ್ತು ವ್ಯಕ್ತಿಯ ಮಹತ್ವವನ್ನು ಕುರಿತು ಕವಿಗಳು ಕಾವ್ಯ ನಿರ್ಮಿಸುತ್ತಿದ್ದರು. ನವೋದಯ ಕಾವ್ಯದ ಉಗಮದ ಸಂದರ್ಭವು ಭಾರತವು ಪಾರತಂತ್ರ್ಯದಲ್ಲಿದ್ದು ಮುಕ್ತಿಯನ್ನು ಪಡೆಯಲು ಹೋರಾಡುತ್ತಿತ್ತು. ಆಗ ನವೋದಯ ಕವಿಗಳು ಈ ಸನ್ನಿವೇಶವನ್ನೇ ತಮ್ಮ ಕಾವ್ಯದ ವಸ್ತುವಾಗಿ ಬಳಸಿಕೊಂಡರು. ರಾಜಕೀಯ ಸ್ವಾತಂತ್ರ್ಯಕ್ಕಾಗಿ ಹೋರಾಡಿದ ರಾಷ್ಟ್ರ ನಾಯಕರನ್ನು, ಭಾರತದ ಜನರನ್ನು ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮೇಲೆತ್ತಲು ಶ್ರಮಿಸಿದ ಸಮಾಜ ಸುಧಾರಕರನ್ನು ಹಾಗೂ ಜನರಲ್ಲಿ ಭಾರತದ ಗತವೈಭವವನ್ನು ನೆನಪಿಗೆ ತಂದು ದೇಶಭಕ್ತಿಯನ್ನು, ಸ್ವಾತಂತ್ರ್ಯದ ಹಂಬಲವನ್ನು ತುಂಬಲು ಲೇಖನಿಯನ್ನು ಸಾಧನವಾಗಿ ಬಳಸಿಕೊಂಡವರು ನವೋದಯ ಕವಿಗಳು. ಇವರು ಸಮಾಜದಲ್ಲಿನ ಅನೈಕ್ಯತೆ, ಅನ್ಯಾಯ, ಅಸಮಾನತೆ, ಆಕ್ರಮಣ ಮುಂತಾದ ಸಮಸ್ಯೆಗಳನ್ನು ಬಯಲಿಗೆಳೆದು, ಅವುಗಳ ಪರಿಹಾರಕ್ಕೆ ಮಾರ್ಗವನ್ನು ತಮ್ಮ ಕಾವ್ಯದ ಮೂಲಕ ತೋರಿಸಲು ಶ್ರಮಿಸಿದರು. ಹಾಗಾಗಿ, ಅವರಿಗೆ ಸ್ವಾತಂತ್ರ್ಯ ಆಂದೋಲನ ಕಾವ್ಯದ ವಸ್ತುವಾಯಿತು. ಸ್ವಾತಂತ್ರ್ಯ ಆಂದೋಲನದಲ್ಲಿ ಸಕ್ರೀಯವಾಗಿ ಭಾಗವಹಿಸಿದ ಹೋರಾಟಗಾರರ ಆದರ್ಶ, ನೈತಿಕ ಮೌಲ್ಯಗಳನ್ನು ಉತ್ತಮೀಕರಿಸಿದರು. ಅಲ್ಲದೇ ಸಾಮಾಜಿಕವಾಗಿ, ರಾಜಕೀಯವಾಗಿ ದುರವಸ್ಥೆಯಲ್ಲಿದ್ದ ಭಾರತವು ಪರಿವರ್ತನೆಗೆ ಒಳಗಾಗಬೇಕು. ಇದರಿಂದ ಸಾಮಾನ್ಯರ ಬದುಕು

ಉತ್ತಮವಾಗುತ್ತದೆಂದು ನಂಬಿದ್ದರಿಂದ ಬಡತನ, ಹಸಿವು, ಬಾಲ್ಯ ವಿವಾಹ, ವಿಧವಾ ಸಮಸ್ಯೆ, ಮೂಢನಂಬಿಕೆ, ಕಂದಾಚಾರಗಳ ವಿರುದ್ಧ ನುಡಿಗೊಟ್ಟಿದ್ದಾರೆ. ಈ ಎಲ್ಲ ಅಂಶಗಳನ್ನು ನವೋದಯ ಕವಿಗಳು ತಮ್ಮ ಕಾವ್ಯದಲ್ಲಿ ಹೇಗೆ ಪ್ರತಿ ಮೂಡಿಸಿದ್ದಾರೆಂಬುದನ್ನು ಈ ನಿಬಂಧದ ಮೂಲಕ ತಿಳಿಸುವ ಪ್ರಯತ್ನ ಮಾಡಿದ್ದೇನೆ.

ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಜನತೆಯಲ್ಲಿ ಏಕತೆ, ಐಕ್ಯತೆ, ಸಾಮರಸ್ಯ ಭಾವಗಳನ್ನು ತುಂಬಿ, ಆಂದೋಲನದಲ್ಲಿ ಭಾಗವಹಿಸಲು ಉತ್ಸಾಹವನ್ನುಂಟು ಮಾಡಿದ ನವೋದಯ ಕಾವ್ಯವನ್ನು ಅಧ್ಯಯನ ಮಾಡಿ, ಅದನ್ನು ಹೊರ ಸೆಳೆಯುವ ಉದ್ದೇಶವನ್ನು ಹೊಂದಿ, ಬಿ.ಎಂ.ಶ್ರೀ ಅವರಿಂದ ವಿ.ಕೃ.ಗೋಕಾಕ್‌ವರೆಗಿನ ಕಾವ್ಯವನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ನವೋದಯ ಕಾವ್ಯವು ರೊಮ್ಯಾಂಟಿಕ್ ಮತ್ತು ರಮ್ಯ ಕಾವ್ಯದಿಂದ ಹೇಗೆ ರೂಪಿತವಾಗಿದೆ ಹಾಗೂ ಸ್ವತಂತ್ರವಾಗಿಯೂ ಯಾವ ರೀತಿ ವಿಶಿಷ್ಟತೆಯನ್ನು ಪಡೆದು ತನ್ನದೇ ಆದ ಲಕ್ಷಣಗಳನ್ನು ಮೈಗೂಡಿಸಿಕೊಂಡು ನಿಂತಿದೆ ಎಂಬುದನ್ನು ತಿಳಿಯಲಾಯಿತು. ಇಲ್ಲಿ ನವೋದಯ ಸಾಹಿತ್ಯವನ್ನು ಪ್ರಧಾನವಾಗಿ ನೋಡುತ್ತಾ, ನಂತರ ಕಾವ್ಯದ ಪ್ರೇರಣೆ ಪ್ರಭಾವಗಳನ್ನು ಗುರುತಿಸಲಾಗಿದೆ.

ವ್ಯಾಪಾರದ ನೆಪವೊಡ್ಡಿಕೊಂಡು ಬಂದ ವಿದೇಶೀಯರು ಭಾರತದಲ್ಲಿ ವಸಾಹತು ಶಾಹಿ ನೆಲೆಗಳನ್ನು ಸ್ಥಾಪಿಸಿಕೊಂಡು ನೆಲೆಯೂರಲು ಪ್ರಾರಂಭಿಸಿದರು. ಇವರನ್ನು ಭಾರತದಿಂದ ಹೊರ ಹಾಕಲು ಗಾಂಧೀಜಿಯವರ ನಾಯಕತ್ವದಲ್ಲಿ ಹೋರಾಟಗಾರರು ಆತ್ಮವಿಶ್ವಾಸದಿಂದ ಬ್ರಿಟಿಷ್ ಸರ್ಕಾರದೊಡನೆ ಶಾಂತಿಯುತವಾಗಿ ನಡೆದುಕೊಳ್ಳುವುದರ ಮೂಲಕ ಸ್ವಾತಂತ್ರ್ಯ ಗಳಿಸಿದ ಬಗೆಯನ್ನು ತಿಳಿಯಲಾಯಿತು. ಭಾರತದ ಸ್ವಾತಂತ್ರ್ಯ ಸಂಗ್ರಾಮಕ್ಕೆ ಕರ್ನಾಟಕದಲ್ಲಿಯೂ ಯಾವ- ಯಾವ ಪ್ರಮುಖ ಘಟನೆಗಳು ಪ್ರೇರಣೆ, ಪೋಷಕವಾಗಿ ಕಂಡು ಬಂದಿವೆಂಬುದನ್ನು ವಿಶದವಾಗಿ ವಿವರಿಸಲಾಗಿದೆ.

ಹೊಸಗನ್ನಡ ಉದಯದ ಸಂದರ್ಭದಲ್ಲಿ ಭಾರತ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿದ್ದುದನ್ನು ಕಂಡ ಕವಿಗಳು ಭಾರತೀಯರನ್ನು ಒಂದುಗೂಡಿಸಿ, ಸಾಮಾಜಿಕ, ರಾಜಕೀಯ ಪರಿವರ್ತನೆಯನ್ನು ಉಂಟುಮಾಡುವುದರ ಮೂಲಕ ಶ್ರೀ ಸಾಮಾನ್ಯನಿಗೆ ಒಂದು ಸ್ಥಾನವನ್ನು ಕಲ್ಪಿಸಲು ಸ್ವಾತಂತ್ರ್ಯವೇ ಸೂಕ್ತ ಮಾರ್ಗ ಎಂಬುದನ್ನು ಅರಿತು ಅದಕ್ಕಾಗಿ ಶ್ರಮಿಸುವುದನ್ನು ಸೂಕ್ಷ್ಮವಾಗಿ ತಿಳಿಸಲಾಗಿದೆ. ಜೊತೆಗೆ ನವೋದಯ ಕವಿಗಳು ಪಾಶ್ಚಾಮಾತ್ಯ ಕಾವ್ಯದ ಪ್ರೇರಣೆ ಪ್ರಭಾವಗಳಿಂದ ಕನ್ನಡದಲ್ಲಿ ಹೊಸ ಕಾವ್ಯ ಪ್ರಕಾರಗಳನ್ನು ಹಾಗೂ ಛಂದೋ ವೈವಿಧ್ಯಗಳನ್ನು ಹೇಗೆ ದುಡಿಸಿಕೊಂಡಿದ್ದಾರೆಂಬುದನ್ನು ಹೇಳಲಾಗಿದೆ.

ದೇಶೀಯವರಲ್ಲಿದ್ದ ಭಿನ್ನತೆಯನ್ನು ದೂರಮಾಡಿ, ಎಲ್ಲರಲ್ಲೂ ಭಾರತೀಯತೆಯ ಬೀಜವನ್ನು ಬಿತ್ತಿ, ಅಂತರಂಗವನ್ನು ನಯವಾಗಿ ತಿದ್ದುವ ಕೆಲಸವನ್ನು ನವೋದಯ ಕವಿತೆಗಳು ಮಾಡಿವೆ. ದೇಶದಲ್ಲಿನ ಪ್ರಭುತ್ವ ಪದ್ಧತಿಯನ್ನು ಮೆಟ್ಟಿನಿಂತು ಹೊಸ ಸಾಮ್ರಾಜ್ಯ ನಿರ್ಮಾಣಕ್ಕೆ ಹೋರಾಡಬೇಕಾದ ಅನಿವಾರ್ಯತೆಯನ್ನು ಕವಿತೆಗಳಲ್ಲಿ

ತುಂಬಿದ್ದಾರೆ. ಆಂದೋಲನದಲ್ಲಿ ತಮ್ಮನ್ನು ತೊಡಗಿಸಿಕೊಂಡ ಹೋರಾಟಗಾರರನ್ನು ಕುರಿತ ಕವಿತೆಗಳ ವಿಶ್ಲೇಷಣೆಯಲ್ಲಿ ಮಹಾತ್ಮ ಗಾಂಧಿಯವರನ್ನು ನೆನೆದು ರಚಿಸಿದ ಕವಿತೆಗಳು ಹೆಚ್ಚಿನ ಪ್ರಮಾಣದಲ್ಲಿ ಲಭ್ಯವಿದ್ದು, ಇತರ ಹೋರಾಟಗಾರರ ಬಗ್ಗೆ ನನಗೆ ಅಷ್ಟಾಗಿ ಕವಿತೆಗಳನ್ನು ಸಂಗ್ರಹಿಸಿ ವಿಶ್ಲೇಷಿಸಲು ಸಾಧ್ಯವಾಗಲಿಲ್ಲ. ದೊರೆತದರಲ್ಲಿ ನನಗೆ ಉತ್ತಮವೆನಿಸಿದವುಗಳನ್ನು ವಿಮರ್ಶಿಸಿದ್ದೇನೆ. ಸಮಾಜದಲ್ಲಿ ಬೇರೂರಿದ್ದ ಅಸಮಾನತೆ, ಅನ್ಯಾಯಗಳ ವಿರುದ್ಧ ಸಮಾನತೆಯ ಸ್ಥಾಪನೆಗಾಗಿ ಸಾಮಾಜಿಕ ಸಮಸ್ಯೆಗಳ ರೂಪವನ್ನು ಬಯಲಿಗೆಳೆದಿದ್ದಾರೆ. ಸ್ವಾತಂತ್ರ್ಯ ಪೂರ್ವದಲ್ಲಿ ರಾಷ್ಟ್ರವು ಕೆಲವೇ ಜನರ ಸ್ವತ್ತಾಗಿತ್ತು. ಕಾನೂನು ನಿಯಮಾವಳಿಗಳು ಅವರಿಗೋಸ್ಕರ ರಚಿತವಾಗುತ್ತಿದ್ದವು. ಹಾಗಾಗಿ ಸರ್ವರ ಆಸೆ ಆಕಾಂಕ್ಷೆ, ಅನುಕೂಲಗಳ ಕಡೆ ಪ್ರಜಾ ಸರ್ಕಾರ ಗಮನಹರಿಸಬೇಕು. ಮೇಲು ಕೀಳುಗಳ ನಡುವಿನ ತಾರತಮ್ಯ ಇಲ್ಲವಾಗಿ ಸಾಮಾನ್ಯನಿಗೆ ಉತ್ತಮ ಸ್ಥಾನ ದೊರಕಿಸಿ ಸರ್ವ ಸಮಾನ ರಾಜ್ಯ ನಿರ್ಮಾಣಕ್ಕೆ ಶ್ರಮಿಸಿರುವುದನ್ನು ಅರಿಯಲಾಗಿದೆ. ಅಂತೆಯೇ ಸ್ವಾತಂತ್ರ್ಯ ಹೋರಾಟದ ಜೊತೆ-ಜೊತೆಯಲ್ಲಿಯೇ ನಡೆದ ಕನ್ನಡ ಭಾಷಾ ಚಳವಳಿಯನ್ನು ಕುರಿತು ಪ್ರಸ್ತಾಪಿಸಲಾಗಿದೆ. ಈ ಎಲ್ಲ ಅಂಶಗಳನ್ನು ಈ ನಿಬಂಧದಲ್ಲಿ ತರಲು ಆದಷ್ಟು ಶ್ರಮವಹಿಸಿದ್ದೇನೆ.

ಪ್ರಭುತ್ವದ ವಿರುದ್ಧ ದನಿಯೆತ್ತಿ, ಪ್ರಜಾಪ್ರಭುತ್ವವನ್ನು ಸ್ಥಾಪಿಸಿಕೊಂಡು, ಸರ್ವರಿಗೂ ಸಮಾನ ಅವಕಾಶಗಳು ದೊರೆತು, ಸ್ವತಂತ್ರ ಸಾಮ್ರಾಜ್ಯದ ಕನಸು ಕಂಡು ಹೋರಾಡಿದುದರ ಫಲವಾಗಿ ಸ್ವಾತಂತ್ರ್ಯವನ್ನು ಗಳಿಸಿದ್ದರೂ, ಇತ್ತೀಚಿನ ದಿನಗಳಲ್ಲಿ ಸಾಮಾನ್ಯರ ಮೇಲಿನ ದೌರ್ಜನ್ಯ ಹೊಸ ರೂಪವನ್ನು ಪಡೆದು ಯಥಾಸ್ಥಿತಿಯಲ್ಲಿ ಮುಂದುವರಿಯುತ್ತಿರುವುದು ವಿಪರ್ಯಾಸದ ಸಂಗತಿಯಾಗಿದೆ. ಇಂತಹ ಸಂದರ್ಭದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆಯನ್ನು ಕುರಿತ ಕಾವ್ಯದ ಅಧ್ಯಯನವು ಒಂದು ಮಾದರಿ ಸಾಮ್ರಾಜ್ಯ ನಿರ್ಮಾಣಕ್ಕೆ ಸಹಕಾರಿಯಾಗುವುದರಲ್ಲಿ ಸಂದೇಹವಿಲ್ಲ. ಹೋರಾಟಗಾರರ ಆದರ್ಶ ಮೌಲ್ಯಗಳು ಅನುಕರಣೀಯವಾದವು. ಸತ್ಯ, ಅಹಿಂಸೆ, ತ್ಯಾಗ, ಬಲಿದಾನ, ಸಮಾನತೆ, ನ್ಯಾಯ ಮುಂತಾದ ನೈತಿಕ ಮೌಲ್ಯಗಳು ಸ್ವಾತಂತ್ರ್ಯದ ಪರಿಕಲ್ಪನೆಯ ವ್ಯಾಪ್ತಿಯಲ್ಲಿ ಬರುವುದರಿಂದ ಇದೆಲ್ಲವೂ ನವೋದಯ ಕಾವ್ಯದಲ್ಲಿ ಹೇಗೆ ಪ್ರತಿಬಿಂಬಿತವಾಗಿದೆಯೆಂಬುದನ್ನು ಈ ನಿಬಂಧದಲ್ಲಿ ತಿಳಿಸಿದ್ದೇನೆ. ಸ್ವಾತಂತ್ರ್ಯ ಆಂದೋಲನವನ್ನು, ಹೋರಾಟಗಾರರನ್ನು, ನವೋದಯ ಕಾವ್ಯವನ್ನು, ಶ್ರೀಸಾಮಾನ್ಯರನ್ನು ಹೀಗೆ ಹಲವು ರೀತಿಯಲ್ಲಿ ಈ ಎಲ್ಲ ವಿಷಯಗಳ ಬಿಡಿ-ಬಿಡಿ ಅಧ್ಯಯನಗಳು ನಡೆದಿವೆಯಾದರೂ ನವೋದಯ ಕಾವ್ಯದಲ್ಲಿ ಸ್ವಾತಂತ್ರ್ಯ ಪರಿಕಲ್ಪನೆಯನ್ನು ಕುರಿತು ಅಧ್ಯಯನವಾಗಿಲ್ಲ. ಹಾಗಾಗಿ ಅದಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳನ್ನು ಒಂದೆಡೆ ತಂದು ವಿಶ್ಲೇಷಿಸುವುದರ ಮೂಲಕ ನವೋದಯ ಕಾವ್ಯದಲ್ಲಿ ಸ್ವಾತಂತ್ರ್ಯದ ಪರಿಕಲ್ಪನೆಯು ಸಾಕಾರಗೊಂಡಿರುವ ಬಗೆಯನ್ನು ಮನಗಾಣಿಸಿದ್ದೇನೆಂಬ ಸಮಾಧಾನವಿದೆ.

# ಅನುಬಂಧ

## ಗ್ರಂಥ ಋಣ


1.ಕುವೆಂಪು ಸಮಗ್ರ ಕಾವ್ಯ, ಸಂಪುಟ -1 ಮತ್ತು 2;

ಪ್ರಕಾಶಕರು-ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ; 2000

2.ಅಂಬಿಕಾತನಯದತ್ತ ಸಮಗ್ರಕಾವ್ಯ, ಸಂಪುಟ-1,2,3,4, ಮತ್ತು 5;ವಾಮನ ಬೇಂದ್ರೆ

ಪ್ರಕಾಶಕರು- ವರಕವಿ ಡಾ.ಬೇಂದ್ರೆ ಸಂಶೋಧನಾ ಸಂಸ್ಥೆ, ಹುಬ್ಬಳ್ಳಿ ;2003

3. ಹಾಡೆಹಾದಿಯ ತೋರಿತು;ಎಚ್.ಎಸ್.ರಾಘವೇಂದ್ರರಾವ್;

ಪ್ರಕಾಶಕರು-ಕನ್ನಡ ಸಂಘ, ಬೆಂಗಳೂರು;1995

4.ನಂದಾದೀಪ;ಎಂ.ಗೋವಿಂದಪೈ;

ಕಾವ್ಯಾಲಯ, ಪ್ರಕಾಶನ, ಮೈಸೂರು; 1968

5.ಗಿಳಿವಿಂಡು;ಎಂ.ಗೋವಿಂದಪೈ;

ಕಾವ್ಯಾಲಯ, ಪ್ರಕಾಶನ,ಮೈಸೂರು; 1983

6. ಹೃದಯರಂಗ;ಎಂ.ಗೋವಿಂದಪೈ;

ಕಾವ್ಯಾಲಯ, ಪ್ರಕಾಶನ, ಮೈಸೂರು

7. ಇಂಗ್ಲಿಷ್ ಗೀತಗಳು;ಬಿಎಂಶ್ರೀ;

ಕಾವ್ಯಾಲಯ, ಪ್ರಕಾಶನ, ಮೈಸೂರು; 1952

8.ಕಟ್ಟುವೆವು ನಾವು; ಎಂ.ಗೋಪಾಲಕೃಷ್ಣ ಅಡಿಗ;

ಅಕ್ಷರ ಪ್ರಕಾಶನ ಸಾಗರ, ಮೈಸೂರು; 1966

9.ಶತಮಾನ ಗಾನ;ಕಯ್ಯಾರ ಕಿಞ್ಞಣ್ಣರೈ

ಕವಿತಾ ಕುಟೀರ, ಪೆರಡಾಲ ; 1986

10. ಸುವರ್ಣ ಸಂಪುಟ;ಸಂಪಾದಕ ಮಂಡಳಿ;

ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ; 1980

11.ಸಮಗ್ರ ಗದ್ಯ, ಸಂಪುಟ-2; ಜಿ.ಎಸ್.ಶಿವರುದ್ರಪ್ಪ;

ಸ್ನೇಹ ಪ್ರಕಾಶನ, ಬೆಂಗಳೂರು; 1994

12.ನವೋದಯ ಕಾವ್ಯ;ದೊಡ್ಡರಂಗೇಗೌಡ;

ಅಳಿಲು ಸೇವಾ ಸಂಸ್ಥೆ, ಬೆಂಗಳೂರು; 2000

13.ಗೋವಿಂದಪೈ ಸಂಸ್ಕೃತಿ ಲೋಕ;ಸಂ.ಕೆ.ಈ.ರಾಧಾಕೃಷ್ಣ;

ವಸಂತ ಪ್ರಕಾಶನ, ಬೆಂಗಳೂರು; 2006

14.ಕನ್ನಡ ನವೋದಯ ಕಾವ್ಯ;ಸಂ.ಗಿರಡ್ಡಿಗೋವಿಂದರಾಜ;

ಮಂಗಳೂರು ಕೇಂದ್ರ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು; 2001

15.ಕನ್ನಡ ನವೋದಯ ಕಾವ್ಯ ಒಂದು ಪುನರ್ ಮೌಲ್ಯಮಾಪನ; ದೊಡ್ಡರಂಗೇಗೌಡ; 2003

16.ಹೊಸಗನ್ನಡ ಸಾಹಿತ್ಯ ಚರಿತ್ರೆ;ಎಲ್.ಎಸ್.ಶೇಷಗಿರಿರಾವ್;

ಅಂಕಿತ ಪುಸ್ತಕ, ಬೆಂಗಳೂರು; 2006

17. ಕನ್ನಡ ಸಾಹಿತ್ಯ ಕೋಶ; ರಾಜಪ್ಪ ದಳವಾಯಿ;

ಕದಿರು ಪ್ರಕಾಶನ, ಮೈಸೂರು; 2003

18. ಕರ್ನಾಟಕದ ಇತಿಹಾಸ;ಎಚ್.ರಾಮಲಿಂಗಪ್ಪ;

ಕಾಲ ಪ್ರಕಾಶನ, ಬೆಂಗಳೂರು; 2002

19.ಭಾರತದ ಸ್ವಾತಂತ್ರ್ಯ ಹೋರಾಟ;ಕೆ.ಸದಾಶಿವ;

ಪ್ರಿಯದರ್ಶಿನಿ ಪ್ರಕಾಶನ, ಮೈಸೂರು; 2000

